# ಶ್ರೀರಂಗರ ವಿಶ್ವಾಮಿತ್ರಸೃಷ್ಟಿ ಒಂದು ಸಾಹಿತ್ಯಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ


ಸಂಶೋಧಕಿ

ರಾಯರ್ ಮೇಘಾ ಭೀಮರಾವ್

ಮಾರ್ಗದರ್ಶಕರು

ಡಾ. ಸುಚೇತಾ ನವರತ್ನ

ಅಧ್ಯಾಪಕರು





ಭಾಷಾ ನಿಕಾಯ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

128

# ಶ್ರೀರಂಗರ ವಿಶ್ವಾಮಿತ್ರಸೃಷ್ಟಿ
# ಒಂದು ಸಾಹಿತ್ಯಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ


ಸಂಶೋಧಕಿ

**ರಾಯರ್ ಮೇಘಾ ಭೀಮರಾವ್**





ಮಾರ್ಗದರ್ಶಕರು

**ಡಾ. ಸುಚೇತಾ ನವರತ್ನ**

ಅಧ್ಯಾಪಕರು





ಭಾಷಾ ನಿಕಾಯ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ : ಒಂದು ಸಾಹಿತ್ಯಿಕ ಅಧ್ಯಯನ ಎಂಬ ನಿಬಂಧವನ್ನು ಡಾ.ಸುಚೇತಾ ನವರತ್ನ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

MBRayas

ರಾಯರ್ ಮೇಘಾ ಭೀಮರಾವ್

ಸಂಶೋಧಕಿ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ದಿನಾಂಕ : 30 JUL 2007

ಸ್ಥಳ : ವಿದ್ಯಾರಣ್ಯ

## ದೃಢೀಕರಣ ಪತ್ರ

ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ : ಒಂದು ಸಾಹಿತ್ಯಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಕು.ರಾಯರ್ ಮೇಘಾ ಭೀಮರಾವ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

S. N. Navaratna

ಡಾ.ಸುಚೇತಾ ನವರತ್ನ

ಮಾರ್ಗದರ್ಶಕರು

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ 30 [illegible] 2007

ಸ್ಥಳ : ವಿದ್ಯಾರಣ್ಯ

## ಕೃತಜ್ಞತೆಗಳು

ನಿಬಂಧವನ್ನು ಸಿದ್ಧಪಡಿಸಿಲು ಸೂಕ್ತ ಸಲಹೆ ಸೂಚನೆಗಳೊಂದಿಗೆ ತಾಳ್ಮೆಯಿಂದ ಮಾರ್ಗದರ್ಶನ ನೀಡಿದ ಸುಚೇತಾ ನವರತ್ನ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ. ನಿಬಂಧದ ಅಧ್ಯಯನಕ್ಕೆ ಎಲ್ಲಾ ರೀತಿಯ ನೆರವು ನೀಡಿದ ವಿವಿಧ ಆಯಾಮಗಳನ್ನು ಭೋದಿಸಿದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಪ್ರೊ.ಮಲ್ಲೇಪುರಂ ವೆಂಕಟೇಶ, ಡಾ.ಸುಬ್ಬಣ್ಣ ರೈ, ಡಾ.ಮಾಧವ ಪೇರಾಜೆ, ಸಿ.ವೆಂಕಟೇಶ ಅವರ ಸಹಕಾರವನ್ನು ನೆನೆಯುತ್ತೇನೆ. ವಿಭಾಗದ ಭೋಧಕೇತರ ಸಿಬ್ಬಂಧಿಗಳಿಗೂ ನನ್ನ ಕೃತಜ್ಞತೆ ಸಲ್ಲಿಸುತ್ತೇನೆ. ನನ್ನ ಸಂಶೋಧನೆಯನ್ನು ನಡೆಸಲು ಸೂಕ್ತ ವಾತಾವರಣವನ್ನು ಕಲ್ಪಿಸಿದ ಹಿಂದಿನ ಕುಲಪತಿಗಳಾದ ಮಾನ್ಯ ಡಾ.ಬಿ.ಎ.ವಿವೇಕ ರೈ ಮತ್ತು ಇಂದಿನ ಪ್ರಭಾರಿ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಅವರಿಗೆ, ಕುಲಸಚಿವರಿಗೆ, ಅಧ್ಯಯನಾಂಗದ ನಿರ್ದೇಶಕರಿಗೆ, ಗ್ರಂಥಪಾಲಕರಿಗೆ ಅಭಾರಿಯಾಗಿದ್ದೇನೆ.

ಸದಾ ಮಗಳ ಏಳ್ಗೆಯನ್ನು ಬಯಸುವ ತಂದೆ ತಾಯಿಯರಾದ ಭೀಮರಾವ್ ರಾಯರ್ ಮತ್ತು ಶಾರದಾ ಅವರಿಗೆ ಚಿರಋಣಿಯಾಗಿದ್ದೇನೆ. ಅಕ್ಕರೆಯ ಅಕ್ಕ ವೀಣಾ ಮತ್ತು ಭಾವ ವಿನಾಯಕ, ಪ್ರೀತಿಯ ಅಣ್ಣ ವಿಜಯ, ತಮ್ಮ ಚೇತನ, ತಂಗಿ ಸೌಮ್ಯ ಮತ್ತು ಪೂರ್ವಿ ಇವರ ಪ್ರೋತ್ಸಾಹವನ್ನು ಮತ್ತು ಚಿಕ್ಕಪ್ಪ, ಚಿಕ್ಕಮ್ಮ ಮತ್ತು ತಂದೆಯ ಸ್ಥಾನದಲ್ಲಿರುವ ಸಿದ್ಧಣ್ಣ ಉತ್ನಾಳ ಮತ್ತು ಗುರುವಾದ ವೆಂಕಟಗಿರಿ ದಳವಾಯಿಯವರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ. ಈ ಅಧ್ಯಯನಕ್ಕೆ ಎಲ್ಲಾ ರೀತಿಯಿಂದಲೂ ಸಹಾಯ ಮಾಡಿದ ನನ್ನ ಸ್ನೇಹಿತರುಗಳಾದ ಅನುಪಮಾ, ಧರ್ಮವೀರ, ದೀಪಾ, ಸುಮನಾ, ವಿನಯ, ರಂಜನಾ, ಅಮಿತ, ಉಮಾ, ಬೇಬಿ, ಅನು, ಸುಕನ್ಯಾ, ಪಾರ್ವತಿ, ಶಿವು, ಕಾವೇರಿ, ತುಕಾರಾಮ, ಸಾವಿತ್ರಿ, ಲಲಿತಾ ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಅಲ್ಪಾವಧಿಯಲ್ಲಿ ಡಿ.ಟಿ.ಪಿ ಮಾಡಿಕೊಟ್ಟ ಶಿವಕುಮಾರರವರನ್ನು ನಾನು ನೆನೆಯುತ್ತೇನೆ.

**ರಾಯರ್ ಮೇಘಾ ಭೀಮರಾವ್**

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ಉದ್ದೇಶ :

ಕನ್ನಡ ನವೋದಯ ಸೃಷ್ಟಿಸಿದ ಅಪೂರ್ವ ವ್ಯಕ್ತಿಗಳಲ್ಲಿ ಶ್ರೀರಂಗರ ಹೆಸರು ಪ್ರಮುಖವಾದುದು. ಇವರ ಸಾಹಿತ್ಯ ಕೃಷಿ ವಿಪುಲ ಹಾಗೂ ವೈವಿಧ್ಯಪೂರ್ಣವಾಗಿದೆ. ಸಾಹಿತ್ಯದ ವಿವಿಧ ಪ್ರಕಾರಗಳಾದ ನಾಟಕ, ಕಾದಂಬರಿ, ಹರಟೆ, ವೈಚಾರಿಕ ಗ್ರಂಥಗಳು, ಚರಿತ್ರೆ, ಆತ್ಮಚರಿತ್ರೆ ಹೀಗೆ ಇನ್ನೂ ಹಲವಾರು ಪ್ರಕಾರಗಳಲ್ಲಿ ಶ್ರೀರಂಗರು ವಿಪುಲ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ಶ್ರೀರಂಗರು ಕನ್ನಡದ ಮುಖ್ಯ ನಾಟಕಕಾರರಲ್ಲಿ ಒಬ್ಬರು. ಅವರ ನಾಟಕಗಳಲ್ಲಿ ಹರಿಜನ್ವಾರ, ಶೋಕಚಕ್ರ, ಕತ್ತಲೆ ಬೆಳಕು, ಕೇಳು ಜನಮೇಜಯ, ರಂಗನಾಟಕ ಮುಂತಾದ ನಾಟಕಗಳ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಇವರನ್ನು ಹೆಚ್ಚಾಗಿ ನಾಟಕಕಾರರೆಂದೇ ಗುರುತಿಸುವುದು ರೂಢಿ. ಇದಲ್ಲದೆ ಅವರು ಕಾದಂಬರಿ ಕ್ಷೇತ್ರದಲ್ಲೂ ಸಾಕಷ್ಟು ಕೃತಿಗಳನ್ನು ರಚಿಸಿದ್ದಾರೆ. ಅವರು ಒಟ್ಟು ೧೩ ಕಾದಂಬರಿಗಳನ್ನು ಬರೆದಿದ್ದಾರೆ. ಇವರ ಮೊದಲ ಕಾದಂಬರಿಯಾದ ವಿಶ್ವಾಮಿತ್ರಸೃಷ್ಟಿಯನ್ನು ಹೊರತುಪಡಿಸಿದರೆ ಉಳಿದ ೧೨ ಕಾದಂಬರಿಯ ಬಗ್ಗೆ ಈವರೆಗೂ ಅಷ್ಟಾಗಿ ಚರ್ಚೆ ಆಗಿಲ್ಲ. ಆದರೆ ಶ್ರೀರಂಗರ ಒಟ್ಟು ಸಾಹಿತ್ಯದಲ್ಲಿ ಅವರ ಮೊದಲ ಕಾದಂಬರಿಯಾದ ವಿಶ್ವಾಮಿತ್ರಸೃಷ್ಟಿ ಕೃತಿಯ ಬಗ್ಗೆ ಮಾತ್ರ ಅಲ್ಪಸ್ವಲ್ಪ ಚರ್ಚೆ ನಡೆದಿರುವುದು ಮಾತ್ರ ಕಂಡುಬಂದಿದೆ.

ಓ.ಎಲ್.ನಾಗಭೂಷಣಸ್ವಾಮಿ ಅವರ ತಮ್ಮ 'ಪ್ರಜ್ಞಾಪ್ರವಾಹ ತಂತ್ರ' ಎಂಬ ಪುಸ್ತಕದಲ್ಲಿ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯ ಪ್ರಜ್ಞಾಪ್ರವಾಹ ತಂತ್ರದ ಬಗ್ಗೆ ವಿಮರ್ಶಿಸಿದ್ದಾರೆ; ಅಷ್ಟೇ ಅಲ್ಲದೇ ಗಿರಡ್ಡಿ ಗೋವಿಂದರಾಜ ಅವರು ತಮ್ಮ 'ಕಾದಂಬರಿಯ ವಸ್ತು ಮತ್ತು ತಂತ್ರ' ಎಂಬ ಪುಸ್ತಕದಲ್ಲಿ ಕಾದಂಬರಿಯ ವಸ್ತು ಮತ್ತು ಪ್ರಜ್ಞಾಪ್ರವಾಹ ತಂತ್ರಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟು, ಈ ಕಾದಂಬರಿಯನ್ನು ವಿಮರ್ಶಿಸಿದ್ದಾರೆ. ಕೀರ್ತಿನಾಥ ಕುರ್ತಕೋಟಿ ಅವರು ತಮ್ಮ 'ಯುಗಧರ್ಮ' ಹಾಗೂ

ಸಾಹಿತ್ಯ ದರ್ಶನ' ಎಂಬ ಪುಸ್ತಕದಲ್ಲಿ ವಿಶ್ವಾಮಿತ್ರನ ಸೃಷ್ಟಿ ಮನುಷ್ಯ ಜೀವನವನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ಭಿನ್ನ ಸನ್ನಿವೇಶದಿಂದ ನೋಡಲು ಸಾಧ್ಯ ಎಂದು ವಿಮರ್ಶಿಸಿದ್ದಾರೆ. ಜಿ.ಎಸ್.ಆಮೂರ ಅವರು 'ಆಧುನಿಕ ಕನ್ನಡ ಸಾಹಿತ್ಯದ ವಿರಾಟಪುರುಷ' ಎಂಬ ಪುಸ್ತಕದಲ್ಲಿ ಕಾದಂಬರಿಯನ್ನು ಯಾವುದೇ ಸಾಂಪ್ರದಾಯಿಕ ಮಾನದಂಡದಿಂದ ಅಳೆದರೂ ವಿಶ್ವಾಮಿತ್ರಸೃಷ್ಟಿ ತೃಪ್ತಿಕೊಡಲಾರದು ಎಂದು ಹೇಳಿ ಇದು ವೈಚಾರಿಕ ಹಿನ್ನೆಲೆಯಲ್ಲಿ ಮೂಡಿಬಂದಿದೆ ಎಂದು ವಿಮರ್ಶಿಸಿದರು. ಕೆ.ವಿಜಯಶ್ರೀ ಅವರು 'ಕನ್ನಡ ನವ್ಯ ಕಾದಂಬರಿಗಳು' ಎಂಬ ಪುಸ್ತಕದಲ್ಲಿ ಈ ವಿಶ್ವಾಮಿತ್ರಸೃಷ್ಟಿ ಕಾದಂಬರಿ ಆಧುನಿಕತೆಯ ಫಲವಾಗಿ ಅಣಕಗೊಂಡಿದೆ. ಹೊಸತು ಹಳತರ ಸಂಘರ್ಷವನ್ನು ಕಾದಂಬರಿ ಒಳಗೊಂಡಿರುವ ಬಗ್ಗೆ ವಿಮರ್ಶೆ ಮಾಡಿದ್ದಾರೆ. ಆದರೆ ಈ ಕಾದಂಬರಿಯ ಬಗೆಗೆ ಸಮಗ್ರ ಚಿಂತನೆ ಈವರೆಗೂ ನಡೆಯದೇ ಇರುವುದು ನಮ್ಮ ಸಾಹಿತ್ಯದ ಬಹು ದೊಡ್ಡ ನಷ್ಟ ಎಂದು ಹೇಳಿದರೆ ತಪ್ಪಾಗಲಾರದು. ಇದಕ್ಕೆ ಕಾರಣ ಇದೊಂದು ವಿಭಿನ್ನ ಬಗೆಯ ಕಾದಂಬರಿ ಆಗಿದ್ದರಿಂದ ಆಗಿನ ವಾಚಕರ ಮಟ್ಟಕ್ಕೆ ಎಟುಕದೆ ಹೋಗಿರುವುದರಿಂದ ಈ ಕಾದಂಬರಿಯನ್ನು ರಂ.ಶ್ರೀ. ಮುಗಳಿ ಅವರು 'ವಿಚಿತ್ರ' ಕಾದಂಬರಿ ಎಂದು ಕರೆದಿದ್ದಾರೆ. ಇನ್ನು ಕೆಲವು ವಿಮರ್ಶಕರು ಆ ಕಾಲಕ್ಕೆ ಶ್ರೀರಂಗರು ಈ ಕಾದಂಬರಿಯ ಬಗ್ಗೆ ಇಟ್ಟ ದಿಟ್ಟ ಹೆಜ್ಜೆಯಾಗಿದೆ ಎಂದು ಪ್ರಶಂಸಿದ್ದಾರೆ. ಇಂತಹ ಒಂದು ವಿಭಿನ್ನ ದೃಷ್ಟಿಕೋನದ ಈ ವಿಶ್ವಾಮಿತ್ರಸೃಷ್ಟಿಯ ಸಾಹಿತ್ಯಿಕ ಅಧ್ಯಯನ ಮಾಡುವುದು ನನ್ನ ಉದ್ದೇಶವಾಗಿದೆ.

ಸೃಜನಶೀಲ ಮತ್ತು ಹೊಸ ಪ್ರಯೋಗಶೀಲ ಅಭಿವ್ಯಕ್ತಿಯನ್ನು ಬೆಳೆಸಿಕೊಂಡ ಶ್ರೀರಂಗರು ವಸಾಹತುಶಾಹಿ ಶಿಕ್ಷಣ ಮತ್ತು ಪರಂಪರೆಯ ಹಿನ್ನೆಲೆಯಲ್ಲಿ ವಿಶ್ವಾಮಿತ್ರಸೃಷ್ಟಿ ಕಾದಂಬರಿ ಬರೆದಿದ್ದಾರೆ. ಆ ಮೂಲಕ ಸಮಕಾಲೀನ ಪರಂಪರೆ ಸಳುಹನ್ನು ಶ್ರೀರಂಗರು ಈ ಕಾದಂಬರಿಯಲ್ಲಿ ಕೊಟ್ಟಿದ್ದಾರೆ. ಅದು ಅಂದಿನ ಸಮಕಾಲೀನ ಪರಿಸರದ ಪ್ರಭಾವವೇ ಎಂಬುದನ್ನು ಅಧ್ಯಯನ ಮಾಡುವುದು ಕೂಡಾ ನನ್ನ ಉದ್ದೇಶವಾಗಿದೆ.

ವಿಶ್ವಾಮಿತ್ರಸೃಷ್ಟಿ ವಸಾಹತುವಾದದ ಹಿನ್ನೆಲೆಯಲ್ಲಿ ಶಿಕ್ಷಣ ಮತ್ತು ಪಲ್ಲಟಗೊಳ್ಳುವ ಪರಂಪರೆಯ ನೆಲೆಯಲ್ಲಿ ಮೂಡಿಬಂದಿದೆ. ವಸಾಹತುಶಾಹಿ ಶಿಕ್ಷಣ ಮತ್ತು ಪರಂಪರೆಯ ಹೋರಾಟವನ್ನು ನಾಯಕ ಹಾಗೂ ಸುತ್ತಲಿನ ಸಮಾಜದ ಪ್ರತೀಕವಾಗಿರಿಸಿ ಅಭಿವ್ಯಕ್ತಗೊಳಿಸಿರುವ ಕ್ರಮ, ಬಳಸಿಕೊಂಡ ಕಥಾತಂತ್ರ. ಇವುಗಳ ಮೂಲಕ ಪ್ರಾಯೋಗಿಕ ಹಂತವಾಗಿ ಕಂಡುಬರುವ ಹೊಸ ದೃಷ್ಟಿಕೋನ ಇವೇ ಮೊದಲಾದ ಅಂಶಗಳನ್ನು ಈ ಅಧ್ಯಯನದ ಮೂಲಕ ತಿಳಿಯಪಡಿಸುವುದು ನನ್ನ ಉದ್ದೇಶವಾಗಿದೆ.

ಅಷ್ಟೇ ಅಲ್ಲದೇ ಶ್ರೀರಂಗರು ತಮ್ಮ ಕಾದಂಬರಿಯಾದ ವಿಶ್ವಾಮಿತ್ರಸೃಷ್ಟಿಯಲ್ಲಿ ವ್ಯಕ್ತಿಪ್ರಜ್ಞೆ ಮತ್ತು ಸಮಾಜಪ್ರಜ್ಞೆಯನ್ನು ಯಾವ ರೀತಿ ಚಿತ್ರಿಸಿದ್ದಾರೆ ಎಂಬುದನ್ನು ಅರಿಯುವುದು ಕೂಡಾ ನನ್ನ ಉದ್ದೇಶವಾಗಿದೆ.

**ಸ್ವರೂಪ :**

ಶ್ರೀರಂಗರ ವಿಶ್ವಾಮಿತ್ರಸೃಷ್ಟಿಯನ್ನು ಮುಖ್ಯ ಕೇಂದ್ರವನ್ನಾಗಿ ಇಟ್ಟುಕೊಂಡು ಚರ್ಚಿಸುವುದು ನನ್ನ ಮುಖ್ಯ ಸ್ವರೂಪವಾಗಿದೆ. ಅಧ್ಯಯನಕ್ಕೆ ಇರುವ ಉದ್ದೇಶವನ್ನು ಹೇಳುತ್ತ ನನ್ನ ಅಧ್ಯಯನಕ್ಕಿರುವ ಇತಿಮಿತಿ ಸೂಚಿಸಲಾಗಿದೆ. ಈ ಅಧ್ಯಯನದ ಸ್ವರೂಪವನ್ನು ಹೀಗೆ ವರ್ಗೀಕರಿಸಿದ್ದೇನೆ.

೧. ಕಾದಂಬರಿಯ ಹುಟ್ಟು ಮತ್ತು ಬೆಳವಣಿಗೆ

೨. ಕಾದಂಬರಿಯ ಸಮಕಾಲೀನತೆ

೩. ವಿಶ್ವಾಮಿತ್ರಸೃಷ್ಟಿಯ ವಿವಿಧ ದೃಷ್ಟಿಕೋನಗಳು

a. ಕಾದಂಬರಿಯ ಇತಿವೃತ್ತ

b. ಕಾದಂಬರಿಯ ಆಶಯ ಆಕೃತಿ

c. ಕಾದಂಬರಿಯ ಪಾತ್ರ ವೈವಿಧ್ಯ

d. ಕಾದಂಬರಿಯ ಭಾಷೆ ಮತ್ತು ಶೈಲಿ

ಇವುಗಳನ್ನು ಸ್ವರೂಪದಲ್ಲಿ ಚರ್ಚಿಸಲು ಉದ್ದೇಶಿಸಿದ್ದೇನೆ.

ಮೊದಲನೆಯ ಅಧ್ಯಾಯದಲ್ಲಿ ಕಾದಂಬರಿಯ ಹುಟ್ಟು ಮತ್ತು ಬೆಳವಣಿಗೆಯ ಸಮೀಕ್ಷೆ ಮಾಡಲಾಗಿದೆ. ಎರಡನೆಯ ಅಧ್ಯಾದಲ್ಲಿ ಶ್ರೀರಂಗರ ಕಾದಂಬರಿಯ ಸಮಕಾಲೀನತೆಯನ್ನು ಹೇಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ೧೯೩೦-೧೯೫೦ರ ವರೆಗಿನ ಅವಧಿಯಲ್ಲಿ ಬರುವ ಕಾದಂಬರಿಯನ್ನು ಚರ್ಚೆ ಮಾಡುತ್ತಾ ಅದರಲ್ಲಿ ಬರುವ ಅಸ್ಪೃಶ್ಯತೆ, ಬಾಲ್ಯವಿವಾಹ, ಜಾತಿವಾದ ಇವುಗಳ ಹಿನ್ನೆಲೆಯಲ್ಲಿ ಮೂಡಿಬಂದರೂ ಕೂಡಾ ಅದೇ ಅವಧಿಯ ಶ್ರೀರಂಗರು ಇವೆಲ್ಲಕ್ಕಿಂತ ಭಿನ್ನವಾದ ರೀತಿಯಲ್ಲಿ ವಿಶ್ವಾಮಿತ್ರಸೃಷ್ಟಿ ಕಾದಂಬರಿಯನ್ನು ರಚಿಸಿರುವುದನ್ನು ಗುರುತಿಸಲು ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕಾದಂಬರಿಯ ವಿವಿಧ ದೃಷ್ಟಿಕೋನವನ್ನು ಹಲವು ವರ್ಗೀಕರಣದ ಮೂಲಕ ಹೇಳಲಾಗಿದೆ. ಅದರಲ್ಲಿ ಮೊದಲನೆಯ ವರ್ಗೀಕರಣದಲ್ಲಿ ವಿಶ್ವಾಮಿತ್ರಸೃಷ್ಟಿ ಕಾದಂಬರಿಯ ಇತಿವೃತ್ತವನ್ನು ಸಂಕ್ಷಿಪ್ತವಾಗಿ ಹೇಳಲು ಪ್ರಯತ್ನಿಸಲಾಗಿದೆ.

ಎರಡನೆಯ ವರ್ಗೀಕರಣದಲ್ಲಿ ವಿಶ್ವಾಮಿತ್ರಸೃಷ್ಟಿ ಕಾದಂಬರಿಯನ್ನು ಬರೆಯುವಾಗ ಕೃತಿ ಮತ್ತು ಕೃತಿಕಾರರ ಆಶಯವೇನೆಂಬುದನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಮೂರನೆಯ ವರ್ಗೀಕರಣದಲ್ಲಿ ವಿಶ್ವಾಮಿತ್ರಸೃಷ್ಟಿ, ಕಾದಂಬರಿಯಲ್ಲಿ ಬರುವ ಪಾತ್ರಗಳು ಈ ಕಾದಂಬರಿಯ ಮೂಲಕ ಓದುಗರಿಗೆ ಏನನ್ನು ಹೇಳಲು ಬಯಸುತ್ತವೆ ಎಂಬುದನ್ನು ಗುರುತಿಸಲು ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ವರ್ಗೀಕರಣದಲ್ಲಿ ಕಾದಂಬರಿಯ ಭಾಷೆ ಮತ್ತು ಶೈಲಿಯ ಬಗ್ಗೆ ಹೇಳಲಾಗಿದೆ. ಪ್ರಸ್ತುತ ಕಾದಂಬರಿಯಲ್ಲಿ ಶ್ರೀರಂಗರು ಯಾವ ಭಾಷೆ ಬಳಸಿದ್ದಾರೆ ಎಂಬುದನ್ನು ಹೇಳುತ್ತಾ ಸಂಭಾಷಣೆಯ ಸ್ವಾರಸ್ಯ ವಿವರಿಸಿ ಅವುಗಳ ಸಾರ್ಥಕತೆಯನ್ನು ಗುರುತಿಸಲಾಗಿದೆ. ಅಷ್ಟೇ ಅಲ್ಲದೇ ಜನರ ವ್ಯಾವಹಾರಿಕ ಭಾಷೆಯಿಂದಲೇ ಆಯ್ದುಕೊಂಡ ಉಪಮೆ, ಹೋಲಿಕೆಯನ್ನು ಚರ್ಚಿಸುತ್ತಾ, ಕಾದಂಬರಿಯಲ್ಲಿ ಬಳಸಲಾದ ಕವನದ ತುಣುಕುಗಳ ಮೂಲಕ ಬರವಣಿಗೆಯ ಶೈಲಿಯನ್ನು ಗುರುತಿಸಲು ಪ್ರಯತ್ನ ಮಾಡಲಾಗಿದೆ.

**ವ್ಯಾಪ್ತಿ :**

ಶ್ರೀರಂಗರು ಒಟ್ಟು ೧೩ ಕಾದಂಬರಿಗಳನ್ನು ಬರೆದರು. ಅದರಲ್ಲಿ ಅವರ ಮೊದಲ ಕಾದಂಬರಿಯಾದ ವಿಶ್ವಾಮಿತ್ರಸೃಷ್ಟಿಯ ವೈಶಿಷ್ಟ್ಯ, ವೈವಿಧ್ಯತೆ ಹಾಗೂ ಸಾಹಿತ್ಯ ಲೋಕದಲ್ಲಿ ಅದು ವ್ಯಾಪಿಸಿರುವ ಬಗೆಯನ್ನು ಕುರಿತು ಅಧ್ಯಯನ ಮಾಡುವುದು ಪ್ರಸ್ತುತ ಪ್ರಬಂಧದ ವ್ಯಾಪ್ತಿಯಾಗಿದೆ. ಅವರ ಉಳಿದ ೧೨ ಕಾದಂಬರಿಯ ವಿವರ ಈ ರೀತಿಯಾಗಿದೆ.

**೨. ಭರಮಪ್ಪನ ಭೂತ :**

ಸ್ವತಂತ್ರ್ಯ ಮತ್ತು ರಹಸ್ಯ ಕಾದಂಬರಿಗಳನ್ನು ಬರೆದವರಲ್ಲಿ ಶ್ರೀರಂಗರು ಮೊದಲಿಗರು ಅವರು ತಮ್ಮ ಎರಡನೆಯ ಕಾದಂಬರಿಯಾದ ಭರಮಪ್ಪನ ಭೂತದಲ್ಲಿ ಚಿತ್ರಿಸಿದ್ದಾರೆ.

ಭರಮಪ್ಪ ಒಬ್ಬ ಒಕ್ಕಲಿಗ ಬಡತನದ ಕಾರಣ ಹೆಂಡತಿ ಮತ್ತು ಮಕ್ಕಳನ್ನು ಹಳ್ಳಿಯಲ್ಲಿ ಬಿಟ್ಟು ಧಾಗಳ್ಳಿಗೆ ಬಂದಿದ್ದ ಭವಾನಿ ಶ್ರೀಮಂತ ವ್ಯಕ್ತಿ ಭಾನುಮತಿಯ ಜೊತೆ ಅನೈತಿಕ ಸಂಬಂಧ ಇಟ್ಟುಕೊಂಡು ಅವಳನ್ನು ಗರ್ಭಿಣಿಯನ್ನಾಗಿ ಮಾಡಿದವನು. ನಂತರ ಭಾನುಮತಿಯ ಕೊಲೆ ಆಗುತ್ತದೆ. ಅವಳ ಸಾವಿಗೆ ಯಾರು ಕಾರಣ ಎಂದು ವಿಚಾರಣೆ ಮಾಡುವುದರೊಂದಿಗೆ ಕಥೆ ಮುಕ್ತಾಯವಾಗುತ್ತದೆ. ಬುದ್ಧಿ ಮತ್ತು ತರ್ಕಗಳಲ್ಲಿ ಶ್ರೀರಂಗರಿಗಿದ್ದ ಶ್ರದ್ಧೆಯ ನಿದರ್ಶನವೆಂದು ಈ ಕಾದಂಬರಿಗೆ ಸೀಮಿತವಾದ ಮಹತ್ವ ಇದ್ದೇ ಇದೆ ಎನ್ನಬಹುದು.

**೩. ಪುರುಷಾರ್ಥ :**

ಪುರುಷಾರ್ಥವು ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ರಚಿತವಾದ ಕಾದಂಬರಿ. ಇಲ್ಲಿ ನಾಲ್ಕು ಪಾತ್ರಗಳಿವೆ. ಈ ಕಾದಂಬರಿಯಲ್ಲಿ ನಾಲ್ಕು ಪಾತ್ರಗಳಿದ್ದರೂ ಮಾಧವನೇ ಅದರ ಕೇಂದ್ರ ವ್ಯಕ್ತಿಯಾಗಿದ್ದಾನೆ. ಮಾಧವನಂತಹರು ಪ್ರಾರಂಭಕ್ಕೆ ಚಳುವಳಿಯಲ್ಲಿ ಸೇರಿದ್ದರಿಂದ ನಲವತ್ತು ಕೋಟಿ ಜನಸಂಖ್ಯೆಯ ನೂರಾರು ಜಾತಿಗಳುಳ್ಳ ಸಮಾಜದ ನೂರೈವತ್ತು ವರ್ಷಗಳ ಅಭಿಮಾನ ಶೂನ್ಯತೆಯ ಹಿಂದೂಸ್ತಾನಕ್ಕೆ ಸ್ವಾತಂತ್ರ್ಯ ಎಂಬ ವಿಚಾರ ಅವನ ಮೂರು ಸಹಪಾಠಿಗಳಲ್ಲಿ ಬಂದು ಹೋಗುವುದಕ್ಕೆ ಕಾರಣ

ಮಾಧವನನ್ನು ಹೋಲಿಸಿದರೆ ಉಳಿದ ಪಾತ್ರಗಳು ಅಷ್ಟೊಂದು ಸ್ಫುಟವಾಗಿ ಮೂಡಿಬಂದಿವೆಯೆಂದೆನಿಸುವುದಿಲ್ಲ. ಕೈಯಲ್ಲಿ ಧ್ವಜ ಹಿಡಿದು ಕಿಟಕಿಯೊಳಗಿಂದ ಸ್ವಾತಂತ್ರ್ಯ ದಿನದ ಮೆರವಣಿಗೆ ನೋಡಲೆಂದು ಕುಳಿತ ಮಾಧವ ಅಲ್ಲಿಯೇ ಪ್ರಾಣ ಬಿಡುವ ದೃಶ್ಯದೊಂದಿಗೆ ಈ ಕಾದಂಬರಿ ಕೊನೆಗೊಳ್ಳುತ್ತದೆ.

**೪. ಕುಮಾರ ಸಂಭವ :**

ಈ ಕಾದಂಬರಿ ಎರಡು ಭಾಗಗಳಾದ 'ರತಿವಿಲಾಪ' ಮತ್ತು 'ಪಂಚಬಾಣ'ಗಳನ್ನು ಶ್ರೀರಂಗರು ಬೇರೆ ಬೇರೆಯಾಗಿ ಬರೆಯದೆ ಅದನ್ನು ಒಂದೇ ಕಾದಂಬರಿಯಾಗಿ ಪ್ರಕಟಿಸಿದರು ಅವುಗಳಲ್ಲಿ ಒಂದು ಆಂತರಿಕ ಸಂಬಂಧವನ್ನು ಅವರು ಕಲ್ಪಿಸಿದ್ದಾರೆ. ಇವೆರಡಕ್ಕೂ ಒಂದೇ ಹಿನ್ನೆಲೆ ಇದೆ ಎಂದು ಹೇಳುತ್ತ 'ರತಿವಿಲಾಪ' ಹಾಗೂ 'ಪಂಚಬಾಣ' ಈ ಎರಡು ಶೀರ್ಷಿಕೆಗಳ ಸಾಂಕೇತಿಕತೆಯನ್ನು ಅವರು ಈ ಕಾದಂಬರಿಯಲ್ಲಿ ವಿವರಿಸಿದ್ದಾರೆ.

**೫. ಅನಾದಿ ಮತ್ತು ಅನಂತ :**

ಅನಾದಿಯನ್ನು ಶ್ರೀರಂಗರು ತಮ್ಮ ಮೊದಲನೆಯ ಪ್ರೇಮದ ಕತೆ ಎಂದು ಕರೆದಿರುವರು ಅನಾದಿಯಲ್ಲಿ ಪ್ರೇಮವೇ ಏಕೈಕ ವಸ್ತುವಾಗಿರುವುದರಿಂದ ಇದನ್ನು ತಮ್ಮ ಮೊದಲ ಪ್ರೇಮಕತೆಯೆಂದು ಅವರು ಕರೆದಿದ್ದಾರೆ. ಅನಾದಿಯಲ್ಲಿ ಲೈಂಗಿಕತೆಯ ಸಂದರ್ಭದಲ್ಲಿ ದೇಹ ಹಾಗೂ ಮನಸ್ಸುಗಳ ದ್ವಂದ್ವ ತಾತ್ವಿಕ ಅನ್ವೇಷಣೆಯ ವಿಷಯವಾಗಿದೆ. ಈ ಕಾದಂಬರಿಯ ನಾಯಕ ರಾಮಣ್ಣ ಅವನ ಸರಳಾಳ ಮೇಲೆ ಅಖಂಡ ಪ್ರೀತಿ ಇದ್ದರೂ ಕೂಡಾ ರಾಮಣ್ಣ ಕುಮುದಾಳ ಜೊತೆ ಅನೈತಿಕ ಸಂಬಂಧ ಹೊಂದಿದ್ದನು. ಇದೇ ಇದರ ವಸ್ತು.

ಅನಂತದ ಘಟನೆಗಳು ಅನಾದಿಯ ಘಟನೆಗಳು ನಡೆದ ೧೦ ವರ್ಷದ ತರುವಾಯದ ಸಂದರ್ಭಕ್ಕೆ ಸಂಬಂಧಿಸಿದ್ದು, ರಾಮಣ್ಣ ಎದುರಿಸುತ್ತಿರುವ ನೈತಿಕ ಸಮಸ್ಯೆಗಳ ಹಾಗೆಯೇ ಉಳಿದುಕೊಂಡರೆ ನಂತರ ಜೀವನ ನಶ್ವರ ಎಂಬ ಭಾವನೆ ಮನಸ್ಸಿನಲ್ಲಿ ಬಂದು ನಿಲ್ಲುತ್ತದೆ.

**೬. ಪ್ರಕೃತಿ ಪುರುಷ :**

ಪ್ರಕೃತಿ ಪ್ರಕಟವಾದ ಎರಡು ವರ್ಷಗಳ ನಂತರ ಪುರುಷ ಪ್ರಕಟವಾಯಿತು. ಆದರೆ ಇವೆರಡೂ ಒಂದೇ ಕಾದಂಬರಿಯ ಭಾಗಗಳು. ಈ ಕಾದಂಬರಿಯಲ್ಲಿ ಸುಮಾರು ನಾಲ್ಕು ದಶಕಗಳನ್ನೊಳಗೊಂಡ ಮೂರು ತಲೆಮಾರುಗಳ ಚಿತ್ರಣವಿದೆ. ಇದರಲ್ಲಿ ಮಾನವೀಯ ಸಂಬಂಧಗಳ ವಿಶ್ಲೇಷಣೆಯನ್ನು ಚಿತ್ರಿಸಿದ್ದಾರೆ. ಇದನ್ನು ಅಲ್ಲಿಯ ಒಂದು ಪಾತ್ರವಾದ ಶಾಮಣ್ಣನ ಅಂತರಂಗದ ವಿಚಾರಗಳ ಮೂಲಕ ಚಿತ್ರಿಸಿದ್ದಾರೆ. ಈ ಕಾದಂಬರಿಯಲ್ಲಿ ತಾತ್ವಿಕ ಅಂಶಗಳು ಕಂಡುಬಂದರು ತನ್ನ ತಾತ್ವಿಕತೆಯ ಭಾರವನ್ನು ಪಾತ್ರಗಳ ಮೇಲೆ ಹೇರಿಲ್ಲ.

## ೭. ಗೌತಮನ ಶಾಪ :

ಇದೊಂದು ಸಾಮಾನ್ಯ ಕಾದಂಬರಿ. ಈ ಕಾದಂಬರಿಯ ವಸ್ತು, ಮುಗ್ಧತೆಯಿಂದ ಅನುಭವದ ವರೆಗೆ ಮನುಷ್ಯನ ಪ್ರಯಾಣ ಇವೇ ಆಗಿವೆ. ಈ ಕಾದಂಬರಿಯ ನಾಯಕ ಗುಂಡಾಚಾರಿ ಶ್ರೀರಂಗರ ಉಳಿದ ಕಾದಂಬರಿಗಳ ನಾಯಕರಿಗಿಂತ ಭಿನ್ನನಾಗಿದ್ದಾನೆ. ಇವನು ತಂದೆಯ ಲಂಪಟತನವನ್ನು ಕಂಡು ಹತ್ತು ವರ್ಷದವನಾಗಿದ್ದಾಗಲೇ ಮನೆಬಿಟ್ಟು ಒಂದು ಬ್ರಾಹ್ಮಣ ಮನೆತನದ ಸಹಾಯ ದೊರೆಕಿಸಿಕೊಂಡವನು ನಂತರ ಆ ಊರು ಬಿಟ್ಟ ಮೇಲೆ ಅನೇಕ ಲೈಂಗಿಕ ಬಲಾತ್ಕಾರಕ್ಕೆ ಒಳಗಾಗುತ್ತಾನೆ. ಗುಂಡಾಚಾರಿ ಎಷ್ಟು ವಿಚಾರಿಸಿದರೂ ತನ್ನನ್ನು ಇಂದ್ರನ ಸ್ಥಾನದಲ್ಲಿ ಕಂಡುಕೊಳ್ಳುವುದು ಅವನಿಗೆ ಸಾಧ್ಯವಾಗುವುದಿಲ್ಲ.

## ೮. ಸೌಜನ್ಯದ ಬೆಲೆ :

ಸೌಜನ್ಯದ ಬೆಲೆಗೂ ಗೌತಮನ ಶಾಪಕ್ಕೆ ಎರಡು ರೀತಿಯ ಸಂಬಂಧವಿದೆ. ಇವು ಎರಡು ಗುಹ್ಯ ಲೈಂಗಿಕ ರೋಗಗಳು ಈ ಕಾದಂಬರಿಯ ಕೇಂದ್ರಸ್ಥಾನದಲ್ಲಿರುವುದು. ಈ ಕಾದಂಬರಿಯ ಕಥಾನಾಯಕಿ ಲೀಲಾವತಿಯ ಆತ್ಮಕಥೆಯ ರೂಪದಲ್ಲಿದೆ. ಈ ಕಾದಂಬರಿಯಲ್ಲಿ ಕಥಾನಾಯಕಿಯ ಗಂಡನ ಬಗೆಗಿನ ರಹಸ್ಯವನ್ನು ಕೊನೆಯವರೆಗೂ ಹೇಳಲ್ಲ. ಲೀಲಾವತಿಯ ಮದುವೆ ಶೇಷಣ್ಣನ ಜೊತೆ ಆಗುತ್ತದೆ. ಅವಳು ಗರ್ಭಿಣಿ ಆದಾಗ ಅವಳ ತಂದೆ ತಾಯಿ ತೀರಿ ಅವಳು ಏಕಾಕಿ ಆಗುತ್ತಾಳೆ. ಅವಳ ಗಂಡ ಗರ್ಭತೆಗೆಯಿಸಬೇಕು ಎಂದು ಸೂಚನೆ ಕೊಡುತ್ತಾನೆ. ನಂತರ ಲೀಲಾವತಿಯ ಮಾವ ಶಾಮಣ್ಣ ಅವಳನ್ನು ಮದುವೆಯಾಗುತ್ತಾನೆ. ಕಾದಂಬರಿ ಲೀಲಾವತಿಯ ಅಂತರಂಗದಲ್ಲಿ ಕೇಂದ್ರಿತವಾಗುವುದರಿಂದ ಬಾಹ್ಯಜಗತ್ತು ಬಹಳಷ್ಟು ಮಟ್ಟಿಗೆ ಕಣ್ಮರೆಯಾಗುತ್ತದೆ.

## ೯. ವಿಷಚಕ್ರವ್ಯೂಹ :

ಗಾಂಧಿ ಕಾಲದವನಾದ ಗಾಂಧಿ ಭಕ್ತನಾದ ತಂದೆ ಇಂದಿನ ಕಾಲದ ಯುವಕನಾದ ಅವನ ಮಗ ಪರಸ್ಪರರಿಗೆ ಅರ್ಥವಾಗುವಂತೆ ಇಬ್ಬರ ವಿಚಾರ ಸೃಷ್ಟಿಗಳು ಸಂಘರ್ಷದಲ್ಲಿ ತೊಡಗಿದದು ಇಲ್ಲಿ ಈ ಕಾದಂಬರಿಯ ವಸ್ತುವಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ರಾಜಕೀಯ ಮತ್ತು ಸಾಮಾಜಿಕ ಜೀವನದಲ್ಲಿ ತಲೆದೋರಿದ ತಲೆಮಾರುಗಳ ಅಂತರ ಈ ಕಾದಂಬರಿಯ ವಸ್ತುವಾಗಿದೆ. ಈ ಕಾದಂಬರಿಯಲ್ಲಿ ನಡೆಯುವ ಸಂಘರ್ಷ ಎರಡು ತಲೆಮಾರುಗಳಲ್ಲಿರದೆ ರಾಯರ ಕಾಲದ ನಂತರ ಅಧಿಕಾರಕ್ಕೆ ಬಂದ ಭ್ರಷ್ಟ ಮುಂದಾಳು ಹಾಗೂ ತರುಣರ ನಡುವೆ ನಡೆಯುತ್ತದೆ.

## ೧೦. ಉತ್ತರವಿಲ್ಲದ ಪ್ರಶ್ನೆ :

ಈ ಕಾದಂಬರಿಯ ಪ್ರಶ್ನೆಗಳು ಲೈಂಗಿಕತೆಗೆ ಸಂಬಂಧಪಟ್ಟ ಪ್ರಶ್ನೆಗಳೇ ಆಗಿವೆ. ಈ ಕಾದಂಬರಿಯ ಕೇಂದ್ರ ಪಾತ್ರ ಶೀನಿ ಆಗಿದ್ದಾನೆ. ನಂತರ ರಂಗಣ್ಣ ಮತ್ತು ಮಾಧು ಕೂಡಾ ಇಲ್ಲಿಯ ಪಾತ್ರಗಳೇ

# ಅಧ್ಯಾಯ ಎರಡು

## ಕನ್ನಡ ಕಾದಂಬರಿಗಳ ಹುಟ್ಟು ಮತ್ತು ಬೆಳವಣಿಗೆ

ಕನ್ನಡ ಕಾದಂಬರಿ ಪ್ರಪಂಚಕ್ಕೆ ೨೬೦ ವರ್ಷಗಳಷ್ಟು ಇತಿಹಾಸವಿದ್ದು ಇದು ಒಂದು ಭಾಷೆಯ ಸಾಹಿತ್ಯಿಕ ಮೌಲ್ಯವನ್ನು ನಿರ್ಧರಿಸುತ್ತದೆ. 'ಗದ್ಯಂ ಕವಿನಾಂ ನಿಕಶಂ ವದಂತಿ' ಎಂದು ಪ್ರಾಚೀನ ಉಕ್ತಿ ಉಂಟು. ಮಹಾಕಾವ್ಯ ಒಂದು ಕಾಲಕ್ಕೆ ತನ್ನ ಉದ್ದೇಶವನ್ನು ಸಾಧಿಸಿ ಐತಿಹಾಸಿಕವಾಗಿ ಮಾತ್ರ ಬದುಕಿರುವ ಸಾಹಿತ್ಯ ಪ್ರಕಾರವಾದರೆ, ಕಾದಂಬರಿ ಸಮಕಾಲೀನ ಜೀವನಕ್ಕೆ ತೀರಾ ಯೋಗ್ಯವಾದ ರೂಪ(Form)ವಾಗಿ ಕಂಡುಬರುತ್ತದೆ. ೧೯೨೦ರವರೆಗಿನ ಅವಧಿಯ ಕಾದಂಬರಿ ಕನ್ನಡದ ಮೊದಲ ಘಟ್ಟದ ಕಾದಂಬರಿ ಎಂದು ಪರಿಗಣಿತವಾಗಿದ್ದರೂ ಕೂಡ ಸುಮಾರು ೧೯೩೦ರವರೆಗಿನ ಕನ್ನಡದ ಅನುವಾದಿತ ಮತ್ತು ಸ್ವತಂತ್ರ ಕಾದಂಬರಿಯನ್ನು ಕನ್ನಡದ ಮೊದಲಘಟ್ಟದ ಕಾದಂಬರಿ ಎಂದು ಹೇಳುತ್ತಾರೆ. ಈ ಅವಧಿಯಲ್ಲಿ ಐತಿಹಾಸಿಕ, ಸಾಮಾಜಿಕ, ಪೌರಾಣಿಕ ಕಾದಂಬರಿಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಎಲ್ಲ ಕಾದಂಬರಿಗಳ ಮುಖ್ಯ ವಸ್ತು ವಿಧವಾ ವಿವಾಹ, ಬ್ರಿಟಿಷ ಆಡಳಿತ, ವೇಶ್ಯಾಜೀವನ, ಜಮೀನ್ದಾರಿ ವ್ಯವಸ್ಥೆಯೇ ಆಗಿತ್ತು. ಅಷ್ಟೇ ಅಲ್ಲದೇ ಈ ಕಾದಂಬರಿಗಳು ಹೆಚ್ಚಾಗಿ ಹೆಂಗಸರ ಹೆಸರಿನಿಂದ ಕೂಡಿದವುಗಳಾಗಿದ್ದವು. ಈ ವಿಷಯವನ್ನು ಗಮನಿಸುತ್ತಾ ಇಂದಿರಾಬಾಯಿ, ವಾಗ್ದೇವಿ, ಇಂದಿರಾ, ಸೀಮಂತಿನಿ ಇದೇ ರೀತಿ ಭಾರತದ ಎಲ್ಲಾ ಭಾಷೆಗಳ ಮೊದಲ ಕಾದಂಬರಿಗಳಲ್ಲಿ ಹೆಂಗಸರ ಹೆಸರು ಶೀರ್ಷಿಕೆಯಾಗಿ ಕಂಡುಬರುತ್ತದೆ. ಇದಕ್ಕೆ ಕಾರಣ ಆಗಿನ ಕಾಲದ ಸಂಸ್ಕೃತಿಯಲ್ಲಿ ಸ್ತ್ರೀಗೆ ಕೊಟ್ಟಿರುವ ಮಹತ್ವವನ್ನು ಈ ಮೂಲಕ ಕಾಣಬಹುದು.

ಸ್ತ್ರೀಯರ ಸಮಸ್ಯೆ ಅವರ ಸ್ಥಿತಿಗತಿಗಳ ಕುರಿತಾದ ಚರ್ಚೆಯನ್ನು ೧೯೨೦ರ ಅವಧಿಯಲ್ಲಿ ಹೆಚ್ಚಾಗಿ ಕಂಡುಬಂದಿತು. ಅದರ ಪ್ರತಿಧ್ವನಿಯನ್ನು ಕಾದಂಬರಿಯಲ್ಲಿ ತರುವುದು ಆ ಕಾಲಘಟ್ಟದ ಕಾದಂಬರಿಕಾರರ ಮುಖ್ಯ ಗುರಿಯಾಗಿತ್ತು. ಆ ಕಾಲಘಟ್ಟದ ಕಾದಂಬರಿಗಳು ಒಂದು ಕಡೆ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸಿದರೆ ಮತ್ತೊಂದು ಕಡೆ ಭಾಷೆಗೆ ಹೊಸಸ್ಥಿರತೆಯನ್ನು ತಂದುಕೊಡುತ್ತದೆ. ಮೊದಮೊದಲು

ಕನ್ನಡ ಕಾದಂಬರಿಯ ಹುಟ್ಟು ಮತ್ತು ಪ್ರಸಾರದಲ್ಲಿ ಕನ್ನಡ ಪತ್ರಿಕೆಗಳ ಪಾತ್ರ ಬಹಳ ಮುಖ್ಯವಾಗಿತ್ತು. ಮೊದಲ ಘಟ್ಟದ ಕಾದಂಬರಿಗಳು ಸ್ತ್ರೀಕೇಂದ್ರಿತ ಕಾದಂಬರಿಗಳು ಹೆಚ್ಚಾಗಿ ಗೌರವಾನ್ವಿತ ಮಹಿಳೆಗಿರುವ ಸಾಮಾಜಿಕ ಅಪಾಯಗಳು ಅವಳ ಹೆಸರು ಮತ್ತು ಗೌರವಕ್ಕೆ ನಿರಂತರವಾಗಿ ಇರುವ ಬೆದರಿಕೆಗಳು ಈ ವಿಚಾರದ ಸುತ್ತ ಸುತ್ತುತ್ತಿದ್ದವು. ಇನ್ನು ಕೆಲವು ಕಾದಂಬರಿಗಳು ಸಾಮಾಜಿಕ ಕಟ್ಟುಪಾಡುಗಳಿಂದ ಪಾರಾಗುವ ಬುದ್ಧಿವಂತಿಕೆಯನ್ನು ಪ್ರದರ್ಶಿಸಿದರೆ ಇನ್ನು ಕೆಲವು ಕಾದಂಬರಿಗಳು ಸಾಮಾಜಿಕ ಕಟ್ಟುಪಾಡುಗಳ ಬಗ್ಗೆ ಚಿಂತನೆ ಮೂಡಿಸುವ ಸಂಕೀರ್ಣ ಕಾದಂಬರಿಗಳಾಗಿದ್ದವು. "ಕೆ.ಎಸ್ .ರಾಮಮೂರ್ತಿಯವರು ಹೇಳುವಂತೆ ಸಾಂಪ್ರದಾಯಿಕ ಭಾರತೀಯ ಸಮಾಜದ ತಾಯಿ ಮತ್ತು ಆಧುನಿಕ ಕಿರುಕುಟುಂಬದ ತಾಯಿ ಈ ಎರಡು ಪರಿಕಲ್ಪನೆಗಳ ನಡುವೆ ಮೊದಲ ಕಾದಂಬರಿಗಳು ತುಯ್ಯಲಾಡುವುದನ್ನು ಪ್ರಧಾನವಾಗಿ ಕಾಣಬಹುದು."(ಯು.ಮಹೇಶ್ವರಿ, ೨೦೦೧)

೧೯ನೇ ಶತಮಾನದಲ್ಲಿ ನಮಗೆ ಹೆಚ್ಚಾಗಿ ಐತಿಹಾಸಿಕ ಮತ್ತು ಪೌರಾಣಿಕ ಕಾದಂಬರಿಗಳು ಕಂಡುಬರುತ್ತಿದ್ದ ಕಾಲವಾಗಿತ್ತು. ಈ ಕಾದಂಬರಿಗಳು ಕನ್ನಡದ ರಮ್ಯ ಕಥಾನಕಗಳೂ ರೂಪಾಂತರಗಳು, ನಾಟಕಗಳಿಂದ ಹುಟ್ಟಿಕೊಂಡಿದ್ದವು. ಈ ಎಲ್ಲ ಕಾದಂಬರಿಗಳಲ್ಲಿ ಬರುವ ಪಾತ್ರಗಳ ತಾಕಲಾಟಗಳು ಮತ್ತು ಪರಿಸ್ಥಿತಿಗೆ ವಿರುದ್ಧವಾಗಿ ನಡೆಸುವ ಹೋರಾಟಗಳು ಕಂಡುಬರುತ್ತವೆ. ಕಾದಂಬರಿಯ ಕೊನೆಯ ಹಂತ ತಲುಪುವ ಹೊತ್ತಿಗೆ ಈ ಎಲ್ಲ ಪಾತ್ರಗಳು ಬೆಳವಣಿಗೆಯನ್ನು ಪಡೆದು ಪಾತ್ರ, ಘಟನೆಗಳು ಒಂದು ನಿಲುಗಡೆಯ ಹಂತಕ್ಕೆ ತಲುಪುತ್ತದೆ. ಈ ಪ್ರಕ್ರಿಯೆಯಲ್ಲಿ ಕಾದಂಬರಿಯು ವಾಸ್ತವವನ್ನು ಕುರಿತ ತನ್ನ ಚಿಂತನೆಯನ್ನು ಮಂಡಿಸುತ್ತದೆ. ಆ ಮೂಲಕ ಪ್ರಕಟವಾದ ಲಕ್ಷ್ಮಣರಾವ ಗದಗಕರ್ ಅವರ 'ಸೂರ್ಯಕಾಂತ' ಕನ್ನಡದ ಮೊದಲ ಸ್ವತಂತ್ರ ಕಾದಂಬರಿ ನಂತರ ೧೮೯೯ರಲ್ಲಿ ಗುಲ್ವಾಡಿ ವೆಂಕಟಾರಾಯರ ಸ್ವತಂತ್ರ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ' ಇದರ ನಂತರದಲ್ಲಿ ವಾಸುದೇವಾಚಾರ್ಯರ 'ಇಂದಿರೆ' ೧೯೦೮ರಲ್ಲಿ ಪ್ರಕಟವಾದವು. ೧೮೯೭ರಲ್ಲಿ ವೆಂಕಟಕೃಷ್ಣಯ್ಯನವರ 'ಚೋರಗ್ರಹಣ ತಂತ್ರ' ಎಂಬ ಪತ್ತೆದಾರಿ ಕಾದಂಬರಿ ಸೃಷ್ಟಿಯಾದರೆ ಗಳಗನಾಥರು ಐತಿಹಾಸಿಕ ಕಾದಂಬರಿಗಳಿಗೆ ಕೈಹಾಕಿದರು. ಈ ರೀತಿಯಾಗಿ ಕಾದಂಬರಿ ಪ್ರಗತಿಯ ಹಂತದಲ್ಲಿ ಮುಂದುವರೆಯಿತು. "ಗಳಗನಾಥರು ಮತ್ತು ಕೆರೂರ ವಾಸುದೇವಾಚಾರ್ಯರು ರಚಿಸಿದ ಕಾದಂಬರಿಗಳು ರಾಷ್ಟ್ರೀಯವಾದಿ ದೃಷ್ಟಿಯನ್ನು ಉಳ್ಳವಾಗಿದ್ದು, ಪುನರುತ್ಥಾನವಾದಿ ಆಶಯವನ್ನು ಹೊಂದಿವೆ." (ಶಿವರಾಮ ಪಡಿಕಲ್, ೨೦೦೧, ಪುಟ)

ಕನ್ನಡದ ಕಾದಂಬರಿಗಳಲ್ಲಿ ಮೊದಲು ಉತ್ಕಟವಾಗಿ ಪ್ರಾರಂಭವಾದದ್ದೇ ಚಾರಿತ್ರಿಕ ಕಾದಂಬರಿಗಳು. ನಂತರದ ದಿನಮಾನದಲ್ಲಿ ಪುಟ್ಟಣ್ಣನವರು ಸಾಮಾಜಿಕ ಕಾದಂಬರಿಯನ್ನು ಬರೆಯುತ್ತಿದ್ದರು. ಆ ಕಾಲದ ಮೈಸೂರಿನ ಸಾಮಾಜಿಕ ಅವಸ್ಥಾಂತರಗಳ ದಾಖಲೆಗಳಾಗಿ ಪುಟ್ಟಣ್ಣನವರ ಕಾದಂಬರಿಗಳು ಕಂಡುಬಂದವು. "೧೯ನೇ ಶತಮಾನದ ಪುಟ್ಟಣ್ಣನವರ ಕಾದಂಬರಿಗಳ ಮುಖ್ಯ ವಸ್ತು ಮಹಾರಾಜರ ಆಡಳಿತ, ಅದು ಪ್ರಕಟಿಸುವ ಮತ್ತು ಪ್ರತಿನಿಧಿಸುವ ಮೌಲ್ಯಗಳು ಇವೇ ಆಗಿವೆ. ಇದನ್ನು ಗಮನಿಸಲು ಅವರ

'ಮಾಡಿದ್ದುಣ್ಣೋ ಮಹಾರಾಯ' 'ಮುಸುಗ ತೆಗೆಯೋ ಮಾಯಾಂಗನೆ' 'ಅವರಿಲ್ಲದೂಟ' ಕಾದಂಬರಿಯನ್ನು ಪರಿಶೀಲಿಸಬಹುದು. (ಶಿವರಾಮ ಪಡಿಕಲ್, ೨೦೦೧, ಪುಟ ೧೦೪)

ಕನ್ನಡದ ಮೊದಲ ಕಾದಂಬರಿಗಳು ಚಾರಿತ್ರಾತ್ಮಕ ತಿಳುವಳಿಕೆಯನ್ನು ನೀಡುವ ಕಾದಂಬರಿಗಳಾಗಿವೆ. ಆಗಿನ ಕಾಲದ ಕಾದಂಬರಿಯಲ್ಲಿ ಹೆಸರುಗಳನ್ನು ಹೆಚ್ಚಾಗಿ ಬಳಸುತ್ತಿದ್ದರು. ಅದರಿಂದ ಕಾದಂಬರಿ ಕೆಲವೊಂದು ಸಲ ಗೊಂದಲಕ್ಕೀಡು ಮಾಡುತ್ತಿದ್ದವು. ಆದರೆ, ವಸಾಹತುಶಾಹಿ ಪ್ರಜ್ಞೆ ಹೆಚ್ಚಾದಂತೆಲ್ಲಾ ಹೆಸರಿನ ಬಳಕೆ ಕಡಿಮೆಯಾಗಿದೆ ಮತ್ತು ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಅದನ್ನು ರಚಿಸುತ್ತಾರೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾದಂಬರಿ ಯುಗ ಕಾಣಿಸಿಕೊಂಡದ್ದು ವಿಶಿಷ್ಟವಾಗಿದೆ. ಆಂಗ್ಲ ವಿದ್ಯಾಭ್ಯಾಸದ ಪರಿಣಾಮವಾಗಿ ನವೀನ ವಿಚಾರಗಳು ತಲೆಯೆತ್ತತೊಡಗಿದವು. ವಸಾಹತುಶಾಹಿ ಪ್ರಭಾವದಿಂದ ಅನುವಾದಗೊಂಡ ಮೊದಲ ಕಾದಂಬರಿ ಕ್ರೈಸ್ತಧರ್ಮದ ನೈತಿಕ ನಂಬಿಕೆ ಮತ್ತು ಮಧ್ಯಮವರ್ಗದ ವೈಚಾರಿಕತೆಗಳ ನಡುವೆ ಒಂದು ಬಗೆಯ ಹೊಂದಾಣಿಕೆಯನ್ನು ಸಾಧಿಸುವ ಕಾದಂಬರಿಯಾಗಿದೆ. ಅಷ್ಟೇ ಅಲ್ಲದೆ ಈ ಕಾದಂಬರಿಗಳು ವಾಸ್ತವಕ್ಕೆ ಹತ್ತಿರವಾದ ಭ್ರಮೆಯ ಜಗತ್ತನ್ನು ಸೃಷ್ಟಿಸುವುದರ ಮೂಲಕ ಸಮಕಾಲೀನ ಬದುಕನ್ನು ವಿಶ್ಲೇಷಿಸುವ ಕೆಲಸವನ್ನು ಮಾಡುತ್ತವೆ. ೧೯ನೆಯ ಶತಮಾನದಲ್ಲಿ ಕಾದಂಬರಿಯ ಮುಖ್ಯ ವಸ್ತು ಪ್ರಾಚೀನ ಜೀವನದ ಬಗೆಗಿನ ಗೌರವ ಶ್ರದ್ಧೆ, ಪ್ರೀತಿ ಹಾಗೂ ಹಳೆಯ ಮೌಲ್ಯಗಳನ್ನು ತಿಳಿಸಿದರೆ ನಂತರದ ಕಾದಂಬರಿಗಳು ಕಲ್ಪಕತೆಯನ್ನು ಮತ್ತು ಜಾನಪದೀಯತೆಯನ್ನು ಕಳೆದುಕೊಂಡ ಹೊಸ ನೈತಿಕತೆಯನ್ನು ಹೇಳುವ ಕಾದಂಬರಿಗಳಾಗಿವೆ. ಮೊದಲ ಕಾದಂಬರಿಗಳ ಭಾಷಾ ಶ್ರೇಣೀಕರಣಕ್ಕೆ ಮುಖ್ಯಕಾರಣವೆಂದರೆ ಪತ್ರಿಕೆಗಳು ಇವುಗಳು ವಿವಿಧ ಊರುಗಳಿಂದ ಪ್ರಕಟವಾಗುತ್ತಿದ್ದುದು ತಿಳಿದುಬರುತ್ತದೆ. ಗದ್ಯದ ಬೆಳವಣಿಗೆ, ರಾಷ್ಟ್ರೀಯತೆಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಪತ್ರಿಕೆಯ ಪಾತ್ರ ಮಹತ್ವದ್ದಾಗಿದೆ. ಜನಜೀವನದ ಕಡೆಗೆ ಪತ್ರಿಕೆಗಳು ವಿಶೇಷವಾದ ಲಕ್ಷ್ಯವನ್ನು ಸೆಳೆದಿದ್ದರಿಂದ ಕಾದಂಬರಿಯ ಭಾಷೆ ಉತ್ತಮ ರೀತಿಯಲ್ಲಿ ಕಾಣಲು ಸಾಧ್ಯವಾಯಿತು.

'ಆನಂದ ಮಠ' 'ವಿಷವೃಕ್ಷ' ಮೊದಲಾದ ಕಾದಂಬರಿಯಲ್ಲಿ ಸಂಸ್ಕೃತ ಭಾಷೆಯನ್ನು ಬಳಸಿದ್ದರಿಂದ ಅಲ್ಲಿಯ ಪ್ರಕೃತಿಯ ವರ್ಣನೆ ಮತ್ತು ಸ್ತ್ರೀವರ್ಣನೆಗಳ ಕೆಲವು ಶಬ್ದಗಳ ಬಳಕೆಯಿಂದಲೇ ಅವು ಶೋಭಾಯಮಾನವಾಗಿದೆ. ಅದೇ 'ದೇವಿಚೌಧುರಾಣಿ'ಯಂಥ ಕೃತಿಯಲ್ಲಿ ಬರುವ ಹೇಳಿಕೆ ವಾತಾವರಣವನ್ನು ಗಮನಿಸಿದರೆ ಅದರಲ್ಲಿ ವಿದೇಶಿಯತೆಯ ಪ್ರಭಾವಿರುವುದು ಕಂಡುಬರುತ್ತದೆ. ಆಗಿನ ಕಾಲದಲ್ಲಿ ಕಾದಂಬರಿ ಹುಟ್ಟದಿದ್ದರೆ, ಕನ್ನಡದ ಜನರೂ ಸಾಹಿತ್ಯದ ಬಗ್ಗೆ ಆಸಕ್ತಿಯನ್ನು ಹೊಂದಲು ಮತ್ತೆ ಕೆಲವರ್ಷಗಳು ಬೇಕಾಗುತ್ತಿದ್ದವು. ಆಗ ಸಾಹಿತ್ಯ ಓದುವುದು ಕೇವಲ ಪಂಡಿತರಿಗೆ ಮೀಸಲಾಗಿತ್ತು. ಆಗ ಕಾದಂಬರಿಗಳು ಪಂಡಿತರಷ್ಟೇ ಅಲ್ಲದೆ ಉಳಿದ ಜನತೆಯ ನಡುವೆ ಸೇತುವೆಯಾಗಿ ನಿಂತಿತು. ಇದರಿಂದ ರಚಿತವಾದ ಕಾದಂಬರಿಯಿಂದ ಜನತೆಗೆ ಸಾಹಿತ್ಯದ ಅಭಿರುಚಿ ಬೆಳೆಯಲು ಸಾಧ್ಯವಾಯಿತು. ಈ ರೀತಿಯ ಬದಲಾವಣೆ ಭಾಷೆ ಮತ್ತು ಸಾಹಿತ್ಯದಲ್ಲಿ ಆಗಲು ವಸಾಹತುಶಾಹಿ ಪ್ರಜ್ಞೆಯೇ ಕಾರಣವಾಗಿದೆ

ಎನ್ನಬಹುದು. ವಸಾಹತೀಕರಣವೆನ್ನುವುದು ಒಂದು ಸೀಮಿತ ಪ್ರಕ್ರಿಯೆಯಲ್ಲ. ಅದು ನಾಡಿನಲ್ಲಿ ಆಮೂಲಾಗ್ರ ಪರಿವರ್ತನೆಯನ್ನುಂಟು ಮಾಡಿದ ಮಹಾನ್ ಘಟನೆ. "ಬಿಪಿನ್ ಚಂದ್ರ ಅವರು ಗುರುತಿರುವ ಹಾಗೆ ವಸಾಹತುಶಾಹಿ ಆಧುನೀಕರಣ ಕೇವಲ ಆರ್ಥಿಕ ವ್ಯವಹಾರವಲ್ಲ. ಅದು ಆರ್ಥಿಕ, ಸಾಮಾಜಿಕ, ರಾಜಕೀಯ, ಆಡಳಿತಾತ್ಮಕ, ಸಾಂಸ್ಕೃತಿಕ ಕ್ಷೇತ್ರದಲ್ಲಿಯೂ ಕಂಡುಬರುತ್ತದೆ. ವಸಾಹತುಶಾಹಿಯು ಕಾದಂಬರಿಯಲ್ಲಿ ಸಾಮಾಜಿಕ ಕ್ರಾಂತಿಯನ್ನೇನೂ ತರಲಿಲ್ಲ, ಬದಲಾಗಿ ಕೆಲವು ಪರಿವರ್ತನೆಯನ್ನು ತಂದಿತು. ಕಾದಂಬರಿಯ ಶ್ರೇಣೀಕರಣವನ್ನು ಮುಂದುವರೆಸಿದ ಮತ್ತು ಪರಿವರ್ತಿಸಿದ ರೀತಿಯಲ್ಲಿ ಅದು ರೂಪುಗೊಂಡಿತು."

ಮಿಶನರಿಗಳ ಮತ ಪ್ರಸಾರ, ಬ್ರಿಟಿಷರ ಆಡಳಿತ ಪದ್ಧತಿ ಇಂಗ್ಲೀಷ್ ವಿದ್ಯಾಭ್ಯಾಸ ಇವುಗಳ ಫಲವಾಗಿ ಹುಟ್ಟಿಕೊಂಡ ದೇಸಿ ವಿದ್ಯಾವಂತ ವರ್ಗದ ಅಂತರಂಗದಲ್ಲಿ ಮೂಡಿದ ರಾಷ್ಟ್ರೀಯತೆಯ ಮನೋಭಾವ ೧೯ನೇ ಶತಮಾನದ ಕಾದಂಬರಿಗೆ ಕಾರಣವಾಗಿದೆ. "೧೯ನೇ ಶತಮಾನದ ಪ್ರಸಿದ್ಧ ಸಾಮಾಜಿಕ ಸಂಸ್ಥೆಗಳಾದ ಬ್ರಹ್ಮಸಮಾಜ ಥಿಯೋಸೋಫಿಕಲ್ ಸೊಸೈಟಿ, ಆರ್ಯ ಸಮಾಜ ಈ ಎಲ್ಲ ಸಂಸ್ಥೆಗಳೂ ಭಾರತೀಯ ಇಂಗ್ಲೀಷ್ ವಿದ್ಯಾವಂತ ವರ್ಗದವರಿಂದ ಸ್ಥಾಪಿತವಾಗಿದೆ. ಕಾದಂಬರಿಯೂ ಇದೇ ವರ್ಗದ ತಾತ್ವಿಕತೆಯಿಂದ ಹುಟ್ಟಿದೆ."(ಶಿವರಾಮಪಡಿಕಲ್, ೨೦೦೧, ಪುಟ ೩೯) ಇಂಗ್ಲೀಷ್ ವಿದ್ಯಾವಂತವರ್ಗ ತನ್ನದೊಂದು ಸಾಂಸ್ಕೃತಿಕ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತದೆ. ಬೇರೆ ಭಾಷೆಯಲ್ಲಿ ಪ್ರಕಟವಾದ ಮೊದಲ ಕಾದಂಬರಿಯಲ್ಲಿ ಈ ರೀತಿಯ ಸಾಮಾಜಿಕ ಅಂಶವನ್ನು ತರಲಾಗಿದೆ. ಈ ವಸಾಹತುಶಾಹಿಯಿಂದ ಹುಟ್ಟಿದ ಕಾದಂಬರಿಯು ಒಂದು ಕಡೆ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸಿದರೆ ಮತ್ತೊಂದೆಡೆ ಅದು ಭಾಷೆಗೆ ಹೊಸ ಸ್ಥಿರತೆಯನ್ನು ತಂದುಕೊಡುತ್ತದೆ. ವಸಾಹತುಶಾಹಿ ಸಂಸ್ಕೃತಿಯಿಂದ ಹುಟ್ಟಿದ ಕಾದಂಬರಿಯು ಸಮಾಜದ ಉನ್ನತಿ ಮತ್ತು ಜನಸಾಮಾನ್ಯರನ್ನು ಒಂದೆಡೆ ತರುತ್ತದೆ. ಅದರ ಜೀವನಶೈಲಿ, ಭಾಷಾಶೈಲಿಗಳನ್ನು ಕಾದಂಬರಿಯಲ್ಲಿ ಜೊತೆಯಾಗಿಯೇ ತರುತ್ತದೆ. ವಸಾಹತುಶಾಹಿ ಕಾದಂಬರಿಯು ವಸಾಹತು ಆಡಳಿತದಲ್ಲಿ ತಲೆಯೆತ್ತಿದ ವಿದ್ಯಾವಂತ ಮಧ್ಯಮ ವರ್ಗವನ್ನು ಅವರ ಆಕಾಂಕ್ಷೆಯನ್ನು ಪ್ರಾದೇಶಿಕ ಭಾಷೆಯಲ್ಲಿ ರೂಪುಗೊಳ್ಳುವಿಕೆಯನ್ನು ಕಾಣಬಹುದು. ಅದೇ ಕಾರಣಕ್ಕಾಗಿ ಇಲ್ಲಿ ಕಾಣಿಸುವ ವ್ಯಕ್ತಿತ್ವ ತನ್ನ ಸಮುದಾಯದ ಆಕಾಂಕ್ಷೆಯನ್ನು ಕಾದಂಬರಿ ಪ್ರಕಾರದಲ್ಲಿ ತರಲು ಪ್ರಯತ್ನಿಸುತ್ತದೆ.

"೧೯ನೇ ಶತಮಾನದ ಭಾರತೀಯ ಇಂಗ್ಲೀಷ ವಿದ್ಯಾವಂತ ವರ್ಗದ ಆಸಕ್ತಿಗಳು ಸ್ಥಾಪಿತ ಸಾಂಪ್ರದಾಯಿಕ ನೆಲೆಗಳ ಮತ್ತು ಸ್ಥಾಪಿತ ಪಾಶ್ಚಿಮಾತ್ಯ ವಿಚಾರಗಳ ನಡುವೆ ಒಂದು ಭಾವತಾತ್ವಿಕ ಮೈತ್ರಿಯನ್ನು ಸಾಧಿಸಿದ್ದರ ಫಲವೇ ಕಾದಂಬರಿಯ ಉಗಮಕ್ಕೆ ಕಾರಣವಾಗಿದೆ. (ಶಿವರಾಮ ಪಡಿಕಲ್, ೨೦೦೧, ಪುಟ ೫೫) ಭಾರತದಲ್ಲಿ ವಸಾಹತು ಆಡಳಿತ ಮತ್ತು ಇಂಗ್ಲೀಷ್ ವಿದ್ಯಾಕ್ರಮಗಳ ಒಂದು ಪರಿಣಾಮವೆಂದರೆ ಬದುಕನ್ನು ನಾವು ಅರಿಯುವ ಕ್ರಮದಲ್ಲಿ ಆದ ಬದಲಾವಣೆಗೆ ಮತ್ತು ಪ್ರಪಂಚವನ್ನು

ನೋಡುವ, ತಿಳಿಯುವ ರೀತಿ ಬದಲಾದವು. ಮತ್ತು ಪರಿಭಾಷೆ, ನುಡಿಗಟ್ಟುಗಳು ಬದಲಾದವು ಮನುಷ್ಯನ ಮಾನವತಾವಾದಿ ಚಿಂತನ ಕ್ರಮವನ್ನು ಇಂಗ್ಲೀಷ್ ವಿದ್ಯಾಭ್ಯಾಸವು ಕಾದಂಬರಿಯ ಮೂಲಕ ತಿಳಿಸಿದೆ. ಕಾದಂಬರಿ ವಸಾಹತು ರಾಷ್ಟ್ರ ಕಲ್ಪನೆಯಿಂದ ಹುಟ್ಟಿರುವುದು ಮಾತ್ರವಲ್ಲ, ಅದು ಗಡಿರೇಖೆಯಲ್ಲಿ ಬದುಕುವ ಜನ ಮತ್ತು ಅವರ ಸಮುದಾಯದಿಂದ ಹುಟ್ಟಿದೆ. ಕಾದಂಬರಿಯಲ್ಲಿ ನಾವು ಕಾಣುವುದು ಅನೇಕ ದನಿಗಳು ಮತ್ತು ಸಂವಾದಗಳು ಹಾಗೂ ಪರಂಪರೆ ಮತ್ತು ಶೈಲಿಗಳು ಇದನ್ನು ನಾವು ಅನುವಾದಿತ ಕಾದಂಬರಿಯಲ್ಲಿ ಕಾಣಬಹುದು. ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿ ಅನುವಾದಿತ ಕೃತಿಗಳ ಸಮೃದ್ಧಿಯ ಕಾಲವಾಗಿತ್ತು. ೧೮೦೦ ರಿಂದ ೧೯೩೦ರ ವರೆಗಿನ ಅವಧಿಯಲ್ಲಿ ಸ್ವತಂತ್ರ್ಯ ರಚನೆಯ ಕಾದಂಬರಿಗೂ ಮಿಗಿಲಾಗಿ ಅನುವಾದಿತ ಕಾದಂಬರಿಗಳು ತಲೆ ಎತ್ತತೊಡಗಿದವು.

"ಕನ್ನಡದ 'ಮೊದಲ ಸ್ವಾತಂತ್ರ್ಯ ಸಾಮಾಜಿಕ ಕಾದಂಬರಿ' ಎಂದು ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿ 'ಅಂಗೀಕೃತ ಗ್ರಂಥ ಸಮುದಾಯದ' ಭಾಗವಾಗಿರುವ ಇಂದಿರಾಬಾಯಿ ಪ್ರಕಟವಾದದ್ದು ೧೮೯೯ರಲ್ಲಿ ಭಾರತೀಯ ಭಾಷೆಗಳ ಪೈಕಿ ಮುಂಚೂಣಿಯಲ್ಲಿದ್ದ ಬಂಗಾಳಿಯ ಮೊದಲ ಕಾದಂಬರಿ 'ಅಲಾರೇಖ ಫರೇರದುಲಾಲ' ೧೮೫೮ರಲ್ಲಿ ಪ್ರಕಟವಾಯಿತು. ಬಂಕಿಮ ಚಂದ್ರರ ದುರ್ಗೇಶ ನಂದಿನಿ ೧೯೬೫ರಲ್ಲಿ ಪ್ರಕಟವಾದರೆ ಮರಾಠಿಯಲ್ಲಿ ಬಾಬ ಪದಮಂಜಿಯ 'ಯಮುನಾ ಪರ್ಯಾಟನೆ' ೧೮೫೭ರಲ್ಲಿ ಪ್ರಕಟವಾದರೆ ಅಸ್ಸಾಮಿ ಭಾಷೆಯಲ್ಲಿ ಪದ್ಮನಾಭ ಬರೂವಾ ಅವರ 'ಭಾನುಮತಿ' ೧೮೯೦ರಲ್ಲಿ ಮುದ್ರಿತವಾಯಿತು." (ಯು.ಮಹೇಶ್ವರಿ, ೨೦೦೧) ಮೈಸೂರು ಭಾಗದಲ್ಲಿ ಕಾದಂಬರಿಯನ್ನು ಹೆಚ್ಚಾಗಿ ರಚಿಸಿದವರು ಬಿ.ವೆಂಕಟಾಚಾರ್ಯರು ಅವರು ಬಂಗಾಲಿ ಕಾದಂಬರಿಗಳ ಅನುವಾದಗಳನ್ನು ಕೈಗೊಂಡಿದ್ದರು. ಸಮಕಾಲೀನ ವಾಸ್ತವಕ್ಕೆ ಹತ್ತಿರವಿರುವ ಮತ್ತು ಸಾಮಾಜಿಕ ಕಾದಂಬರಿಗಿಂತ ಭಿನ್ನವಾದ ಮತ್ತು ರಮ್ಯ ಕಥಾನಕಗಳಿಗೆ ಹತ್ತಿರವಿರುವ ರೀತಿಯಲ್ಲಿ ಬಂಗಾಳಿ ಕಾದಂಬರಿಯನ್ನು ಅವರು ಅನುವಾದಿಸಿದರು. ಈ ಅನುವಾದಿತ ಕಾದಂಬರಿಯಲ್ಲಿ ಬಂಗಾಳ ಮತ್ತು ಮರಾಠಿ ಭಾಷೆಯ ಕಾದಂಬರಿಗೆ ಸಿಕ್ಕಷ್ಟು ಹೆಗ್ಗಳಿಕೆ ತೆಲಗು ಕಾದಂಬರಿಗೆ ಸಂದಿಲ್ಲ. ಆದರೂ ಇಂಗ್ಲೀಷ್ ಭಾಷೆಯಿಂದ ಕೃತಿಗಳು ಅನುವಾದಗೊಂಡಿದ್ದರೂ ಕೂಡ ಬಂಗಾಳಿ, ಮರಾಠಿ ಹಾಗೂ ತೆಲಗು ಭಾಷೆಯ ಅನುವಾದ ಕೃತಿಗಳು ಹೆಚ್ಚು ಅಭ್ಯಾಸಕ್ಕೆ ಯೋಗ್ಯವಾಗಿವೆ. ಬಂಗಾಳಿ ಕಾದಂಬರಿಯಲ್ಲಿ ಸ್ತ್ರೀ ವಿಷಯಕವಾದ ಚಿಂತನೆ ಕಾಣಿಸಿಕೊಂಡರೆ ತೆಲಗು ಭಾಷೆಯಲ್ಲಿ ಬೇರೆಯ ರೀತಿಯ ಸ್ವರೂಪವನ್ನು ತಾಳುತ್ತದೆ. ಈ ಮೂರು ಭಾಷೆಯಿಂದ ಬಂದ ವಿಭಿನ್ನ ಎಳೆಗಳು ಕನ್ನಡ ಕಾದಂಬರಿಯಲ್ಲಿ ಬೇರೆ ಬೇರೆ ರೀತಿಯ ಪ್ರವೃತ್ತಿಗಳಾಗಿ ಮುಂದುವರೆಯಲು ಕಾರಣವಾಗಿವೆ.

ಭಾರತೀಯ ಭಾಷೆಗಳಲ್ಲಿ ಕಾದಂಬರಿ ಪ್ರಕಾರ ಮೊದಲು ಕಾಣಿಸಿಕೊಂಡದ್ದು ಬಂಗಾಳಿ ಭಾಷೆಯಲ್ಲಿ "ವೆಂಕಟಾಚಾರ್ಯರಿಂದ ಅನುವಾದಿತವಾದ ಬಂಗಾಳಿ ಕಾದಂಬರಿಗಳಲ್ಲಿ ಹೆಚ್ಚಿನವು ಸ್ತ್ರೀ ಪ್ರಧಾನವಾದವು ಉದಾ: ದುರ್ಗೇಶ ನಂದಿನಿ, ರಜನಿ, ಇಂದಿರಾ, ವೆಂಕಟಾಚಾರ್ಯರಿಂದ ಅನುವಾದಿತವಾದ ಬಂಕಿಮಚಂದ್ರರ

ಇನ್ನೊಂದು ಕಾದಂಬರಿ ವಿಷವೃಕ್ಷ ೧೯೧೨ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದೆ. ವಿದ್ವಾನ ಬಾಲ ಸರಸ್ವತಿಯವರು ಅನುವಾದಿಸಿದ ಯೋಗೀಂದ್ರನಾಥ ಚಟ್ಟೋಪಾಧ್ಯಾಯರ ವಿಯೋಗಿನಿ ಇನ್ನೊಂದು ಬಂಗಾಳಿ ಮೂಲದ ಕೃತಿಯಾಗಿದೆ." (ಯು.ಮಹೇಶ್ವರಿ, ೨೦೦೧, ಪುಟ ४೦) ವೆಂಕಟಾಚಾರ್ಯರು ಬಂಕಿಮರ ಕಾದಂಬರಿಗಳನ್ನು ಕನ್ನಡಕ್ಕೆ ತರುವುದರ ಮೂಲಕ ಕಾದಂಬರಿಯಲ್ಲಿ ಸನಾತನ ಮೌಲ್ಯಗಳ ಪ್ರತಿಪಾದನೆಗೆ ಚಾಲನೆ ಕೊಡುವ ಕೃತಿಗಳು ಕನ್ನಡಕ್ಕೆ ಬರಲು ಪ್ರೇರಣೆ ನೀಡಿತು. ಮರಾಠಿ ಭಾಷೆಯಿಂದ ಹೆಚ್ಚು ಕಾದಂಬರಿಗಳನ್ನು ಕನ್ನಡಕ್ಕೆ ತಂದ ಮೊದಲಿಗರು ಗಳಗನಾಥರು. ಈ ಪೌರಾಣಿಕ ಕಾದಂಬರಿಗಳನ್ನು ಆಯ್ದುಕೊಳ್ಳುವಾಗಲೂ ಸ್ವತಂತ್ರ ಕೃತಿಗಳನ್ನು ರಚಿಸುವಾಗಲೂ ಐತಿಹಾಸಿಕ ಘಟನೆ ಮತ್ತು ಆವರಣ ಗಳನಾಥರ ಆಸಕ್ತಿಯ ಕೇಂದ್ರವಾಗಿತ್ತು. ಅಸ್ಸಾಂ, ಒರಿಯಾ, ಗುಜರಾತಿ, ತಮಿಳು, ಮಲಯಾಳ ಮುಂತಾದ ಭಾಷೆಗಳಲ್ಲಿ ಸ್ತ್ರೀಯರಿಗೆ ಸಂಬಂಧಿಸಿದಂತೆ ಸುಧಾರಣಾಪರ ಕಳಕಳಿ ಆ ಅವಧಿಯಲ್ಲಿ ವ್ಯಕ್ತವಾಗಿತ್ತು.

"ತಮಿಳಿನಲ್ಲಿ ಮೊದಲ ಕಾದಂಬರಿ 'ಪ್ರತಾಪಮುದಲ' ಎಂದು ಸಾಮಾನ್ಯವಾಗಿ ಹೇಳುವುದಿದ್ದರೂ ಸರ್ಕಾರಿ ಅಧಿಕಾರಿಯಾಗಿದ್ದ ಮಾಧವಯ್ಯ ಬರೆದ 'ಪದ್ಮಾವತಿ ಚರಿತ್ರಂ' ತಮಿಳಿನಲ್ಲಿ ಕಾದಂಬರಿಯ ಚರಿತ್ರೆಯನ್ನು ಆರಂಭ ಮಾಡಿತು ಎನ್ನಬಹುದು." (ಯು.ಮಹೇಶ್ವರಿ, ೨೦೦೧) ಅನುವಾದಿತ ಕೃತಿಗಳು ಎಷ್ಟರ ಮಟ್ಟಿಗೆ ಕನ್ನಡ ಜಾಯಮಾನಕ್ಕೆ ಹೊಂದಿಕೊಳ್ಳುತ್ತವೆ ಎನ್ನುವುದರ ಪರಿಶೀಲನೆಯನ್ನು ಕೆಲವು ಮಾದರಿ ಉದಾಗಳಿಂದ ತಿಳಿಯಬಹುದಾಗಿದೆ.

೧. ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಗೊಂಡ 'ಬಾಣ ಕಾದಂಬರಿ'ಯು ಎರಡೂ ಅನುವಾದಗಳನ್ನು ಮೂಲದೊಂದಿಗೆ ಮತ್ತು ಪರಸ್ಪರ ಹೋಲಿಸಿ ನೋಡುತ್ತಾ ಡಾ.ಶ್ರೀನಿವಾಸ ಹಾವನೂರು ಅವರು ಈ ಕೆಳಗಿನ ತೀರ್ಮಾನವನ್ನು ತಿಳಿಯುತ್ತದೆ.

'ಬಾಣನದು ಅತಿ ಕ್ಲಿಷ್ಟವಾದ ಗದ್ಯ ಅಲ್ಲದೆ ಶ್ಲೇಷಾಲಂಕಾರಗಳಿಂದ ನಿಬಿಡವಾದುದು ಕನ್ನಡ ವಾಚಕರಿಗೆ ತಾಪದಾಯಕವಾದ ಇಂಥ ಅಂಶಗಳನ್ನು ಬಿಟ್ಟುಕೊಟ್ಟು ಲಲಿತ ಮತ್ತು ಹೃದ್ಯವಾದ ವರ್ಣನೆಗಳಿಗೆ ಮಾತ್ರ ಅವಕಾಶವಿತ್ತು. ಕಥೆಯನ್ನು ಮುನ್ನಡೆಸಿಕೊಂಡು ಹೋಗುವಲ್ಲಿ ಇಬ್ಬರೂ ವಿಶೇಷ ಗಮನವಿತ್ತಿದ್ದಾರೆ.

೨. ಎಂ.ಎಸ್.ಪುಟ್ಟಣ್ಣನವರು ರೂಪಾಂತರಿಸಿ 'ಸಮಿತಿ ಮದನ ಕುಮಾರನ' ಚರಿತ್ರೆ ಒಂದು ಉತ್ತಮ ಉದಾಹರಣೆಯಾಗಿದೆ. ಇಲ್ಲಿನ ಸಾಮಾಜಿಕ ವಾತಾವರಣಕ್ಕೆ ಹೊಂದದ ಅಂಶಗಳನ್ನು ಕೈಬಿಡುವುದು ಅಗತ್ಯವಿದ್ದಲ್ಲಿ ಸಂಕ್ಷಿಪ್ತಗೊಳಿಸುವುದು, ಸೂಕ್ತ ಕಂಡ ಅಂಶಗಳ ಸೇರ್ಪಡೆ. ಈ ಎಲ್ಲ ಅಂಶಗಳಲ್ಲಿ ಪುಟ್ಟಣ್ಣನವರ ಕೌಶಲ್ಯ ಪ್ರತಿಬಿಂಬವಾಗಿದೆ. ಕನ್ನಡ ದೇಸಿಯ ಸಮರ್ಥ ಬಳಕೆ ಕೃತಿಯ ಸಿದ್ಧಿಯ ಒಂದು ಕಾರಣವಾಗಿದೆ.'

೩. ಗಳನಾಥರ ಅನುವಾದಗಳನ್ನು ಕುರಿತು ವಿವರವಾದ ಪರಿಶೀಲನೆಯನ್ನು ಡಾ.ಕೃಷ್ಣಮೂರ್ತಿ ಕಿತ್ತೂರ ಅವರು ನಡೆಸಿದ್ದಾರೆ. ಮೂಲ ಕೃತಿಗಳ ಬೆಳಕಿನಲ್ಲಿ ಕನ್ನಡ ಅನುವಾದಗಳ ಸಾರ್ಥಕತೆಯನ್ನು

ಪರಿಶೀಲಿಸುವ ತೌಲನಿಕ ಅಧ್ಯಯನ ಕ್ರಮವನ್ನು ಕಿತ್ತೂರರೂ ಅನುಸರಿಸಿದ್ದಾರೆ. ಅವರ ಪ್ರಕಾರ 'ಗಳನಾಥರು ಎಲ್ಲ ಅನುವಾದಗಳಲ್ಲಿಯೂ ತಮ್ಮದೆಂಬ ಅಂಶವನ್ನು ಸೇರಿಸಿದ್ದಾರೆ. ಆದ್ದರಿಂದ ಈ ಅನುವಾದಗಳು ಗಳನಾಥರ ಕಾದಂಬರಿಗಳೇ ಆದುವಲ್ಲದೆ ಆಪಟೆಯವರ ಅಥವಾ ಬಂಕಿಮಚಂದ್ರರ ಅಥವಾ ಮತ್ತೊಬ್ಬರ ಅನುವಾದಗಳು ಅಥವಾ ಮುಕ್ತ ಅನುವಾದ ಎಂದು ಕರೆಯುವುದಕ್ಕಿಂತ ಇವುಗಳನ್ನು ಸೃಜನಶೀಲ ಅನುವಾದಗಳು ಎಂದು ಕರೆದರೂ ತಪ್ಪಾಗಲಾರದು. ಇವು ಒಂದು ರೀತಿಯಲ್ಲಿ ಪುನಃ ಸೃಷ್ಟಿಗೆ ಸಮವಾಗಿದೆ. ಆದ್ದರಿಂದ ಗಳನಾಥರ ಅನುವಾದಗಳು ಗಳನಾಥರ ಕಾದಂಬರಿಗಳೆಂದೇ ಕರೆಯಿಸಿಕೊಂಡವು." (ಶಿವರಾಮ ಪಡಿಕಲ್, ೨೦೦೧, ಪುಟ ೧೫೫)

ಇಂಗ್ಲೀಷ್ ಭಾಷೆಯಿಂದ ಅನುವಾದಗೊಂಡ ಮಿಶನರಿ ಸಂಸ್ಥೆಗಳ ಮೂಲಕ ಉದಯವಾದ ಅನುವಾದಿತ ಕಾದಂಬರಿಗಳನ್ನು ಆಧುನಿಕ ಸಂದರ್ಭದಲ್ಲಿ ಕಾಣಬಹುದು.

"ಇಂಗ್ಲೀಷ್‌ನಿಂದ ಅನುವಾದಗೊಂಡಿರುವ ಇನ್ನೊಂದು ಕಾದಂಬರಿ 'ನಿರ್ಭಾಗ್ಯ ಮುರಾದವೂ' ವ್ಯಕ್ತಿಯ ಜಯಾಪಜಯಗಳಿಗೆ ವಿವೇಕವೇ ಮುಖ್ಯ ಕಾರಣ ಎನ್ನುವ ನೀತಿಯನ್ನು ಪ್ರತಿಪಾದಿಸುತ್ತದೆ ಎಂದು ಡಾ.ಶ್ರೀನಿವಾಸ ಹಾವನೂರು ಗುರುತಿಸಿದ್ದಾರೆ," (ಶಿವರಾಮ ಪಡಿಕಲ್, ೨೦೦೧, ಪುಟ ೧೭೦) ವೆಂಕಟಾಚಾರ್ಯರು ಕನ್ನಡ ಕಾದಂಬರಿಯ ಪಿತಾಮಹರೆಂದೇ ಪ್ರಸಿದ್ಧರಾಗಿದ್ದಾರೆ. ಅವರು ಬಂಗಾಳಿಯಿಂದ ಅನುವಾದವನ್ನು ಮಾಡಿದ್ದಾರೆ. ಅವರು ಅನೇಕ ಕೃತಿಗಳನ್ನು ಅನುವಾದಿಸಿದ್ದಾರೆ. ಬರವಣಿಗೆಯ ಲೋಕದಲ್ಲಿ ಮೊದಲ ಬಾರಿಗೆ ವಸಾಹತು, ಆಧುನಿಕತೆ, ರಾಷ್ಟ್ರೀಯತೆ ಕುರಿತಾದ ಆಳವಾದ ಚಿಂತನೆಯನ್ನು ಬಂಕಿಮರ ಪಠ್ಯಗಳು ತಿಳಿಸುತ್ತವೆ. ಭಾರತೀಯ ವಿದ್ಯಾವಂತ ವರ್ಗ ತನ್ನನ್ನೂ ತಾನೂ ಕಂಡುಕೊಳ್ಳಲು ತನಗೊಂದು ಸಾಂಸ್ಕೃತಿಕ ವ್ಯಕ್ತಿತ್ವವನ್ನು ಪಡೆದುಕೊಳ್ಳಲು ಈ ಅನುವಾದಿತ ಕಾದಂಬರಿಗಳು ತಿಳಿಸುತ್ತವೆ.

ಈ ರೀತಿಯಾಗಿ ಅನುವಾದಿತ ಕಾದಂಬರಿಯನ್ನು ರಚಿಸುವುದನ್ನು ಬಿಟ್ಟು ಸ್ವತಂತ್ರ ಸೃಜನೆಗೆ ಕೈಹಾಕಿದ ಶ್ರೀರಂಗರು ಕಾದಂಬರಿಯ ಕ್ಷೇತ್ರದಲ್ಲಿ ಅಪೂರ್ವ ಕೃತಿಯನ್ನು ಕೊಟ್ಟಿದ್ದಾರೆ. ಪ್ರಾಯೋಗಿಕ, ವಿಶಿಷ್ಟತೆಯನ್ನು ಅವರ ಮೊದಲ ಕಾದಂಬರಿಯಾದ 'ವಿಶ್ವಾಮಿತ್ರನ ಸೃಷ್ಟಿ'ಯಲ್ಲಿ ಕಾಣಬಹುದು. ಈ ಕಾದಂಬರಿಯಲ್ಲಿ ಗುಣ-ದೋಷಗಳೇನೇ ಇದ್ದರೂ ಅವುಗಳ ಜವಾಬ್ದಾರಿಯನ್ನು ಹೊರುವಷ್ಟು ತ್ರಾಣ ಈ ಪ್ರಯೋಗದಲ್ಲಿದೆ. ಅವರ ಈ ಕಾದಂಬರಿ ಒಂದು ಹೊಸ ಶೈಲಿಯನ್ನು ಹಾಕಿಕೊಟ್ಟಿದೆ. ಕಾದಂಬರಿ ಎನ್ನುವುದು ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ ಅದಕ್ಕೆ ವಿಶಾಲಧೋರಣೆ, ಏಕಸೂತ್ರತೆ ಬೇಕೆ ಬೇಕು ಎಂಬುದನ್ನು ಸ್ವತಃ ಶ್ರೀರಂಗರೇ ಹೇಳಿದ್ದಾರೆ. ಅದಕ್ಕೆ ಆನ್ವಯಿಕತೆಯ ಹೊಸ ಚಾಪನ್ನು 'ವಿಶ್ವಾಮಿತ್ರಸೃಷ್ಟಿ'ಯ ಮೂಲಕ ಕೊಟ್ಟಿದ್ದಾರೆ.

# ಅಧ್ಯಾಯ ಮೂರು

## ಶ್ರೀರಂಗರ ಕಾದಂಬರಿಗಳು ಮತ್ತು ಸಮಕಾಲೀನ ಕಾದಂಬರಿ ಪ್ರಪಂಚ

೧೯೩೦ರ ಸುಮಾರಿಗೆ ನವೋದಯ ಕಾಲಘಟ್ಟದಂತೆಯೇ ತಮ್ಮ ಸಾಹಿತ್ಯಿಕ ನಿಲುವನ್ನು ಪ್ರತಿಪಾದಿಸಿದ ಅನೇಕರು ಹೊಸ ದೃಷ್ಟಿಕೋನ ಭಾವವೈಶಾಲ್ಯ ಹಾಗೂ ಪ್ರಾಯೋಗಿಕ ಹಿನ್ನೆಲೆಯಲ್ಲಿ ನವನವೋನ್ವೇಷತೆಯನ್ನು ಹುಡುಕ ಹೊರಟಿರುವುದು ಕಂಡುಬರುತ್ತದೆ. ತೀರ ನವ್ಯ ಪಂಥದವರು ಎಂದು ಹೇಳಲು ಸಾಧ್ಯವಿರದೇ ಹೋದರೂ ಕೂಡ ನವ್ಯತೆಯ ಹರಿಕಾರರೆನ್ನುವಂತೆ ಕೆಲವರ ಧೋರಣೆಯಿದೆ. ಇನ್ನು ಕೆಲವು ಕಾದಂಬರಿಕಾರರು ನವೋದಯ ನಿಲುವಿನಲ್ಲಿ ನವ್ಯತೆಯ ಪ್ರಭಾವವನ್ನು ಒಗ್ಗಿಸಿ ಮೈಗೂಡಿಸಿಕೊಂಡಿದ್ದಾರೆ. ಒಟ್ಟಿನಲ್ಲಿ ಈ ಹಂತ ಕಾದಂಬರಿ ಪ್ರಪಂಚದ ಎರಡನೆಯ ಹಂತವನ್ನು ಸೂಚ್ಯವಾಗಿ ತೋರಿಸಿಕೊಡುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಅನುಗುಣವಾಗಿ ನಾನು ೧೯೩೦-೧೯೫೦ರ ವರೆಗಿನ ಒಂದು ಸೀಮಿತ ಕಾಲಾವಧಿಯ ಕಾದಂಬರಿಗಳ ಅಧ್ಯಯನದ ಮೂಲಕ ಅಂದಿನ ಸಮಕಾಲೀನ ಪರಿಸರವನ್ನು ಚರ್ಚೆ ಮಾಡಲಾಗಿದೆ. ಈ ಕಾಲಾವಧಿಯಲ್ಲಿ ಬರುವ ಕಾದಂಬರಿಕಾರರು ನವೋದಯ ಕಾಲಘಟ್ಟದವರಾಗಿದ್ದರೂ ಪ್ರಗತಿಶೀಲ ಮನೋಭಾವದ ಮೂಲಕ ನವ್ಯದ ವಿಚಾರಧಾರೆಗೆ ಮಾರ್ಪಡಿಸಿಕೊಂಡಿದ್ದಾರೆ. ಈ ಕಾಲಘಟ್ಟವನ್ನು ಗುರುತಿಸುವಲ್ಲಿ ಕೂಡಾ ಕಾದಂಬರಿಕಾರರ ಒಲವು ನಿಲುವುಗಳನ್ನು ಮಾನದಂಡವಾಗಿಸಿಕೊಳ್ಳಲಾಗಿದೆ. ಯಾಕೆಂದರೆ ಕಾರಂತ, ಗೋಕಾಕ, ಕುವೆಂಪು, ಆನಂದಕಂದ ಇವರೆಲ್ಲರೂ ನವೋದಯದ ಘಟ್ಟದಲ್ಲಿದ್ದುಕೊಂಡೇ ನವ್ಯದ ಹಲವಾರು ಅಂಶಗಳನ್ನು ಸರಿಸುಮಾರು ೧೯೩೦ರ ವೇಳೆಗಾಗಲೇ ತಮ್ಮ ಕೃತಿಯ ರಚನೆಯ ಮೂಲಕ ತೋರಿಸಿಕೊಟ್ಟಿದ್ದಾರೆ. ಶ್ರೀರಂಗರು ಕೂಡಾ ಇದೇ ಭೂಮಿಕೆಯವರಾದುದರಿಂದ ಮತ್ತು ನವ್ಯದ ಯುಗ ೧೯೫೦ರ ಸುಮಾರಿಗೆ ಪ್ರಾರಂಭವಾಗುವದರಿಂದ,

ನವೋದಯದ ೨ನೇ ಘಟ್ಟದಲ್ಲಿನ ಈ ಲೇಖಕರು ಪ್ರತಿಪಾದಿಸಿದ ಸಂಗತಿಗಳು ನವ್ಯತೆಗೆ ಪ್ರತಿಪಾದನೀಯ ಅಂಶಗಳಾದುದರಿಂದ ಈ ೧೯೩೦ ೧೯೫೦ರವರೆಗಿನ ಅವಧಿಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಅಂದರೆ ಸುಮಾರು ೧೯೪೦ರ ಸುಮಾರಿಗೆ ಪ್ರಗತಿಶೀಲ ಚಳುವಳಿ ಮೂರ್ತಗೊಳ್ಳುವುದರಿಂದ ನವ್ಯ ಪಂಥದವರೆಗಿನ ಈ ಪಯಣವನ್ನು ನವೋದಯದ ಸ್ಥಿತಿಯಲ್ಲಿದ್ದರೂ ಅದೂ ತಳೆದ ವಿಭಿನ್ನ ಧೋರಣೆಯನ್ನು ಆಯಾ ಕಾದಂಬರಿಗಳ ಇಲ್ಲವೇ ಕೃತಿಕಾರರ ಮನೋಭೂಮಿಕೆಯ ಹಿನ್ನೆಲೆಯಲ್ಲಿ ಚರ್ಚೆ ಮಾಡಲಾಗಿದೆ.

"ಬದುಕಿನ ಸಂಬಂಧಗಳು ಬದಲಾಗುವ ಬಣ್ಣಗಳನ್ನು ಬಚ್ಚಿಡಲು ಕಾದಂಬರಿ ಅತ್ಯುತ್ತಮ ಮಾಧ್ಯಮ" ಎನ್ನುವ ಲಾರೆನ್ಸ್ "ಕಾದಂಬರಿ ಬದುಕಿನ ಜ್ವಾಜ್ವಲ್ಯಮಾನ ಪುಸ್ತಕ" ಎನ್ನುತ್ತಾರೆ. ಇದರಿಂದಾಗಿಯೇ ಬದುಕಿನ ಬದಲಾದ ಸಂವೇದನೆಗೆ ತಕ್ಕಂತೆ ಕಾದಂಬರಿ ಪ್ರಕಾರದಲ್ಲಿ ಕಾಲಕಾಲಕ್ಕೆ ಹೊಸ ಆವಿಷ್ಕಾರಗಳು ನಡೆದಿವೆ. ಪ್ರಚಲಿತ ಮಾರ್ಗ ಚವಿತಚರ್ವಣವೆನಿಸಿ ತನ್ನ ಹೊಸತನಕ್ಕೆ ಎದುರಾದಾಗ ಅಭಿವ್ಯಕ್ತಿ ಮಾರ್ಗ ಬದಲಾಗಿದೆ. ಕಾವ್ಯ ಸಂಪ್ರದಾಯದಿಂದ ವಾಸ್ತವ್ಯಕ್ಕೆ ಹೊರಳಿದ ಕಾದಂಬರಿ ಪ್ರಕಾರವನ್ನು ಆಧುನಿಕತೆಯತ್ತ ತಂದವರು ಜೇಮ್ಸ್ ಕಾನ್ರಾಡ್, ಜೇಮ್ಸ್ ಜಾಯ್ಸ್, ವರ್ಜಿನಿಯಾ ಉಲ್ಫ್ ಮುಂತಾದವರು" (ಕೆ.ವಿಜಯಶ್ರೀ, ೨೦೦೨, ಪುಟ ೧) ಈ ಕಾಲಕ್ಕಾಗಲೇ ಭಾಷಾಂತರ ಯುಗ ಮುಗಿದು ಹೊಸ ಸ್ವತಂತ್ರ ಕಾದಂಬರಿಗಳು ಅದರಲ್ಲೂ ಸಾಮಾಜಿಕ ವಸ್ತು ವಿಷಯವನ್ನು ಹೊಂದಿದ ಕಾದಂಬರಿಗಳು ಬರಲಾರಂಭಿಸಿದವು. ಈ ಹಂತದಲ್ಲೆ ಕೆಲವು ಕೃತಿಕಾರರ ಪ್ರಯೋಗಶೀಲತೆ ವಾಸ್ತವತೆಯತ್ತ ಹೊರಳಿದವು. ಆ ಕಾಲಕ್ಕೆ ಸಾಂಸ್ಕೃತಿಕ ಪಲ್ಲಟದಿಂದಾಗಿ ರೋಮ್ಯಾಂಟಿಕ್ ಯುಗದ ವೈಭವಕ್ಕಿಂತ ಜನತೆ ತಮ್ಮ ಸಾಮಾಜಿಕ ಒಲವು ನಿಲುವುಗಳಿಗೆ ಹೆಚ್ಚು ಸ್ಪಂದಿಸುತ್ತಿದ್ದರು. ಬದಲಾದ ವೈಚಾರಿಕ ಕ್ರಮ ಜನತೆಯ ಈ ನಿಲುವಿಗೆ ಇಂಬುಕೊಟ್ಟಿತು. "ನವ್ಯ ಕಾದಂಬರಿಗಳ ಆಶಯ ಕೂಡಾ ವಾಸ್ತವತೆಯೇ. ಆದರೆ ವಾಸ್ತವತೆಗೆ ಅದು ಕೊಡುವ ವ್ಯಾಖ್ಯೆ ಮಾತ್ರ ಬೇರೆಯಾಗಿದೆ. ವಾಸ್ತವತೆಯ ಅಸ್ತಿತ್ವ ಬಾಹ್ಯ ಜಗತ್ತಿನಲ್ಲಿರದೆ ಮನುಷ್ಯನ ಪ್ರಜ್ಞೆಯಲ್ಲಿದೆ ಎಂಬ ವ್ಹರ್ಜಿನಿಯಾ ವೃಲ್ಫಳ ಹೇಳಿಕೆ ವಾಸ್ತವ ಮಾರ್ಗದ ಕಾದಂಬರಿ ಮತ್ತು ನವ್ಯ ಮಾರ್ಗದ ಕಾದಂಬರಿ ಇವುಗಳ ನಡುವಿನ ಅಂತರವನ್ನು ತಿಳಿಯುವುದಕ್ಕೆ ಸಹಾಯ ನೀಡುತ್ತಿದೆ." (ಜಿ.ಎಸ್.ಆಮೂರ, ೧೯೮೪, ಪುಟ ೧೦) ಪ್ರಸ್ತುತ ಆಮೂರರ ಮಾತು ನವ್ಯವು ಅಲ್ಲದೆ ನವೋದಯವು ಅಲ್ಲದೇ ಆಧುನಿಕತೆಯತ್ತ ಮುಖಮಾಡಿ ನಿಂತ ಈ ಕಾಲಘಟ್ಟದ ಕಾದಂಬರಿಗಳಿಗೆ ಹೆಚ್ಚು ಅನ್ವಯಿಸುತ್ತದೆ. ವಾಸ್ತವ ಮಾರ್ಗವನ್ನು ಅನುಸರಿಸಿದರೂ ಕೂಡಾ ನವ್ಯ ಎಂದು ಹೇಳಲಾಗದ ಸಂದಿಗ್ಧತೆಯನ್ನು ಈ ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಅಲ್ಲದೇ ಈ ಕಾಲಘಟ್ಟದ ಕಾದಂಬರಿಗಳು ನವ್ಯದ ಅಂಶಗಳನ್ನು ಪ್ರತಿಪಾದಿಸಿದರೂ ಕೂಡ ಭಿನ್ನವಾಗಿವೆ. ವಾಸ್ತವದ ಸಮಸ್ಯೆಗಳ ಚಿತ್ರಣದ ಜೊತೆಗೆ ವ್ಯಕ್ತಿ ಪ್ರಜ್ಞೆಯಂತಹ ಕೆಲವು ಪ್ರಜ್ಞೆಯಲ್ಲಿ ಈ ಸಮಸ್ಯೆಗಳು ಸುತ್ತುವುದನ್ನು ನವ್ಯ ಪ್ರತಿಪಾದಿಸಿದರೆ ಕೇವಲ ವಾಸ್ತವದ ಚಿತ್ರಣವನ್ನೇ ನವೋದಯ ಪ್ರಗತಿಶೀಲ ಕಾದಂಬರಿಗಳು ಪ್ರತಿಪಾದಿಸಿದವು. ಪ್ರಸ್ತುತ ಚರ್ಚೆಯ ಕಾದಂಬರಿಯು ಕೂಡಾ ವಾಸ್ತವದ ಚಿತ್ರಣವನ್ನೆ ಬಂಡವಾಳವಾಗಿಸುವ ಹೊಸ ಶೈಲಿಯೊಂದನ್ನು

ಕಂಡುಕೊಂಡಿದೆ. ಕಾರಂತ ಕುವೆಂಪು ಮೊದಲಾದ ಸಮಕಾಲೀನರು ಕೂಡಾ ನವೋದಯ ಪ್ರಗತಿಶೀಲರಿಗಿಂತ ಭಿನ್ನವಾಗುವದು ಈ ಕಾರಣಕ್ಕಾಗಿಯೇ. ಈ ಲೇಖಕರೆಲ್ಲರೂ ವಾಸ್ತವತೆಯ ಅಸ್ತಿತ್ವವನ್ನು ಮನುಷ್ಯ ಪ್ರಜ್ಞಾಪಾತಳಿಯಲ್ಲಿ ಗ್ರಹಿಸಿದವರೆಂಬುದು ಗಮನೀಯ ಸಂಗತಿ. ಈ ಕಾಲಘಟ್ಟವೇ ಒಂದು ಬಗೆಯ ಸಂಕೀರ್ಣ ಸ್ಥಿತಿಯಲ್ಲಿದೆ. ನವೋದಯದ ಪ್ರಭಾವ ಅದಕ್ಕಿದ್ದರೂ ಕೂಡ ಸ್ವಲ್ಪ ಕಾಲಾವಧಿಯಲ್ಲಿಯ ಸ್ವತಂತ್ರ್ಯ ಸಾಮಾಜಿಕ ಕಾದಂಬರಿಗಳ ಮೂಲಕ ಹೊಸ ಬಗೆಯ ಆಲೋಚನೆಗೆ ಚಾಲನೆ ದೊರೆತರೆ ನಂತರ ವಾಸ್ತವ ಸಮಸ್ಯೆಗಳ ಕೇಂದ್ರೀಕರಣ ಹೊಸ ಪಂಥವೊಂದನ್ನು ಹುಟ್ಟುಹಾಕಿದೆ. ಆದಾದ ಕೆಲವೇ ಅಂತರದಲ್ಲಿ ಕಾರಂತರು, ಗೋಕಾಕರು, ಅನಕೃ, ತರಾಸುರವರ ಮೂಲಕ ಹೊಸ ವೈಚಾರಿಕ ದೃಷ್ಟಿಕೋನವೊಂದರ ಶೋಧವಾಗಿದೆ.

ಭಾಷೆಯ ಮೂಲಕ ಜಗತ್ತನ್ನು ಯಶಸ್ವಿಯಾಗಿ ಪ್ರತಿನಿಧೀಕರಿಸಬಹುದೆಂಬ ಯುರೋಪಿಯನ್ ಶಿಕ್ಷಣ ಕ್ರಮ ಹತ್ತೊಂಬತ್ತನೆಯ ಶತಮಾನಕ್ಕೆ ಕನ್ನಡದಲ್ಲಿಯೂ ಕಾಲಿಟ್ಟಿತು. ದೇಶದಲ್ಲೆಲ್ಲಾ ಸ್ಥಿತ್ಯಂತರದ ಸಂಧಿಕಾಲವಾದರಿಂದ ಸ್ವಾತಂತ್ರ್ಯದ ಹೋರಾಟ ಹುಟ್ಟಿಸಿದ ದೇಶಾಭಿಮಾನ ಆದರ್ಶ ಪಾಶ್ಚಾತ್ಯ ಶಿಕ್ಷಣದಿಂದ ಮೂಡಿದ ವೈಚಾರಿಕ ಮನೋಧರ್ಮ ಈ ಎಲ್ಲ ಅಂಶಗಳು ಅಂದಿನ ಕಾದಂಬರಿಕಾರರು ಮಾನವತಾವಾದವನ್ನು ಅನುಸರಿಸಲು ಕಾರಣೀಭೂತವಾಗಿರಬಹುದು. ಶ್ರೀರಂಗರ ಕಾಲಕ್ಕಾಗಲೇ ಸರಿಸುಮಾರು ೧೯೩೦ರ ವೇಳೆಗೆ ಕಾದಂಬರಿಗಳು ನವ್ಯ ಮಾರ್ಗಕ್ಕೆ ಪೂರಕವಾಗಿದ್ದವು. ಇದಕ್ಕೆ ಪಾಶ್ಚಾತ್ಯ ಐಡಿಯಾಲಜಿಯೇ ಕಾರಣ. ವ್ಯಕ್ತಿಯ ಅಸ್ತಿತ್ವವನ್ನು, ಮನುಷ್ಯನ ಸ್ಥಿತಿಯನ್ನು ಜೀವನ ವ್ಯಕ್ತಿಯಲ್ಲಿ ಮೂಡಿಸುವ ಪ್ರತಿಕ್ರಿಯೆಗಳು ಹೆಚ್ಚು ಚಿಂತನೀಯ ಎನಿಸಿದವು. ಕಾದಂಬರಿಯೊಂದು ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ ಬದಲಾಗಿ ವ್ಯಕ್ತಿಯ ಮನಸ್ಥಿತಿಯ ಮೂಲಕ ಸಾಮಾಜಿಕ ಸಮಸ್ಯೆಗಳನ್ನು ಅರಿಯುವ ಕ್ರಮ ಬಳಕೆಗೆ ಬಂದಿತು. ಒಟ್ಟಿನಲ್ಲಿ "ವ್ಯಕ್ತಿ ವಿಶಿಷ್ಟ ಪ್ರಜ್ಞೆಯ ಮೂಲಕ ಬದುಕನ್ನು ನೋಡುವ ಪರಿಪಾಠ ಜಾರಿಗೆ ಬಂತು. ವ್ಯಕ್ತಿಯ ಒಳಮನಸ್ಸಿನ ವಿಶ್ಲೇಷಣೆ, ಸ್ವಾನುಭವದಲ್ಲಿ ಕಂಡುಕೊಂಡ ಅನುಭವದ ಪರೀಕ್ಷೆಯಲ್ಲಿ ಬದುಕನ್ನು ಅರಿಯುವ ಪ್ರಯತ್ನ ಪ್ರಾರಂಭವಾಯಿತು" (ಕೆ.ವಿಜಯಶ್ರೀ, ೨೦೦೨, ಪುಟ ೩) ಹೆಚ್ಚಾಗಿ ಗದ್ಯದ ಅಂಶಗಳನ್ನು ಪ್ರತಿಪಾದಿಸುವ ಕಾದಂಬರಿಗಳ ನಾಯಕರು ದುರ್ಬಲರು ಅಂತರ್ಮುಖಿಯಾಗಿರುವುದು ಈ ಅಂಶವನ್ನು ದೃಢಪಡಿಸುತ್ತದೆ. ಮೊದಲ ಘಟ್ಟದ ಕಾದಂಬರಿಗಳ ನಾಯಕರ ಆದರ್ಶ ಇಲ್ಲಿಲ್ಲ. ನವೋದಯಕ್ಕಿಂತ ಈ ಕಾಲದ ಕಾದಂಬರಿಗಳು ಭಿನ್ನವಾಗುತ್ತಲೇ ಸಮಕಾಲೀನ ಪ್ರಜ್ಞೆಯನ್ನು ಹುಟ್ಟುಹಾಕಿದ ಬಗ್ಗೆ ಇಲ್ಲಿ ಗಮನಾರ್ಹ ಸಂಗತಿ. ಅಲ್ಲದೇ ಫುಕೋನ ಮಾತಿನಂತೆ ಯಾವ ಸಾಹಿತಿಯು ಸಮಕಾಲೀನ ಪ್ರಜ್ಞೆಯಿಂದ ಹೊರಗಿರುವುದಿಲ್ಲ ಎಂಬ ಮಾತನ್ನು ಇಲ್ಲಿ ಗಮನಿಸುತ್ತಲೇ ಹೇಗೆ ಸಮಕಾಲೀನತೆ ಕೃತಿಕಾರರ ವಾಸ್ತವಾಂಶವು ಆಗುತ್ತದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಕನ್ನಡದಲ್ಲಿ ಬದ್ಧ ಸಾಹಿತ್ಯ ಮೊದಲು ಕಂಡದ್ದು ಪ್ರಗತಿಶೀಲ ಸಾಹಿತ್ಯದಲ್ಲಿ, ಸುಮಾರು ಕ್ರಿ.ಶ. ೧೯೩೫ರಲ್ಲಿ ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲರ ಕಾಲ ಪ್ರಾರಂಭವಾಯಿತು. ಇದರ ನೇತಾರರಾಗಿ ಅನಕೃ,

ತರಾಸು, ಬಸವರಾಜ ಕಟ್ಟಿಮನಿ, ನಿರಂಜನ ಭಾಗವಹಿಸಿದ್ದರು. ಈ ಪ್ರಗತಿಶೀಲ ಸಾಹಿತಿಗಳು ಫ್ರಾನ್ಸಿನ್ ಮೋಪಾಸಾ, ಎಮಿಲಿಜೋಲಾ, ನಾರ್ವೆಯ ಇಬ್ಬನ್, ಮಾಕ್ಸಿಂಗಾರ್ಕಿ ಮುಂತಾದವರಿಂದ ಪ್ರಭಾವಗೊಂಡರು. ಈ ಪ್ರಗತಿಶೀಲ ಸಾಹಿತ್ಯದ ಪ್ರಮುಖ ಪ್ರೇರಣೆಯಾಗಿ ಮಾರ್ಕ್ಸವಾದವು ಕಂಡುಬರುತ್ತದೆ.

ನವೋದಯದ ಲೇಖಕರ ಸಾಹಿತ್ಯವು ವ್ಯಕ್ತಿಯ ಮನಸ್ಸನ್ನು ಮೃದುಗೊಳಿಸುವ ಪ್ರಭಾವ ಎಂದು ನಂಬಿದರೆ ಪ್ರಗತಿಶೀಲ ಸಾಹಿತಿಗಳ ಸಾಹಿತ್ಯವು ಸಾಮಾಜಿಕ ಕ್ರಾಂತಿಯನ್ನು ಸಾಧಿಸುವ ಶಕ್ತಿ ಎಂದು ನಂಬಿದ್ದರು. ಆದರೆ ಎರಡು ಕಾಲಘಟ್ಟದ ಸಾಹಿತಿಗಳು ಬಾಳು ಅರ್ಥಪೂರ್ಣವಾದದು ಎಂದು ನಂಬಿದ್ದರು. ಇಬ್ಬರಲ್ಲಿಯೂ ತ್ಯಾಗ, ಪ್ರಾಮಾಣಿಕತೆ, ಅನುಕಂಪ, ಪ್ರೇಮ, ಸ್ನೇಹ, ದೇಶಪ್ರೇಮ ಇತ್ಯಾದಿ ಅಂಶಗಳು ಇವರ ಸಾಹಿತ್ಯದಲ್ಲಿ ಎದ್ದು ಕಾಣುತ್ತದೆ. ಅಷ್ಟೇ ಅಲ್ಲದೆ ಪ್ರಗತಿಶೀಲ ಸಾಹಿತಿಗಳು ತಮ್ಮ ಸಾಹಿತ್ಯದಲ್ಲಿ ಮಧ್ಯಮ ವರ್ಗದವರ ಮತ್ತು ಬಡದಲಿತರ ಸಮಸ್ಯೆಯನ್ನು ಕುರಿತು ಬರೆಯುತ್ತಾರೆ. ಇದಕ್ಕೆ ಉದಾಹರಣೆಯಾಗಿ ಕನ್ನಡದ ಮೊದಲ ಕಾದಂಬರಿಯಾದ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯನ್ನು ನೋಡಬಹುದು. ಈ ಕಾಲಘಟ್ಟದ ಸಾಹಿತ್ಯವು ಕ್ರಾಂತಿಯಿಂದಲೇ ಶಾಂತಿ ಸಾಧ್ಯ ಎಂದು ನಂಬಿದರೂ ಇದಕ್ಕೆ ಕಾರಣ ಮೂಲತಃ ಮಾರ್ಕ್ಸ್‌ವಾದವೇ. ಈ ಸಾಹಿತ್ಯದ ತಳಹದಿಯಾಗಿರುವುದರಿಂದ ಮಾರ್ಕ್ಸನ ಕ್ರಾಂತಿಕಾರಕ ಉದ್ದೇಶವೇ ಇದರದಾಗಿ ಬೆಳೆದುಬಂದಿತು. ಸಮಾಜದಲ್ಲಿ ಆರ್ಥಿಕ ಸಮಾನತೆಯನ್ನುಂಟು ಮಾಡುವುದು ಇದರ ಉದ್ದೇಶವಾಗಿದೆ. ಅಷ್ಟೇ ಅಲ್ಲದೆ ಈ ಸಾಹಿತ್ಯವು ದೇಶದ ಉದ್ಧಾರ ಮತ್ತು ಆತ್ಮದ ಉದ್ಧಾರಗಳೆರಡನ್ನು ಮಾಡುತ್ತದೆ. ಪ್ರಗತಿಶೀಲ ಸಾಹಿತಿಗಳು ಇದರ ಸಂಪೂರ್ಣ ಪ್ರಯೋಜನವನ್ನು ತನ್ನ ನಾಡಿನವರಿಗೆ ಮಾಡಿಕೊಡಬೇಕೆಂಬ ಉದ್ದೇಶ ಹೊಂದಿದ್ದರು. ಬಂಡವಾಳಶಾಹಿಯನ್ನು ಈ ಸಾಹಿತ್ಯವು ವಿರೋಧಿಸುತ್ತದೆ. ದಲಿತ-ಬಡವರಿಗೆ ಸಹಾಯ ಮಾಡಲು ಹೆಣಗಾಡುತ್ತದೆ. ಸಂಪ್ರದಾಯದ ಜಾಡನ್ನು ಕಿತ್ತೆಸೆದು ವಾಸ್ತವತೆಗೆ ಹೆಚ್ಚಿನ ಮಹತ್ವವನ್ನು ನೀಡುತ್ತದೆ. ಪ್ರಗತಿಶೀಲರು, ಗೌರವಸ್ಥರೂ ಮುಚ್ಚಿಟ್ಟ ಕೆಲವು ವಿಷಯಗಳನ್ನು ಹುಡುಕಿ ಬರೆದರು. ಮಠದಲ್ಲಿ ದೇವಾಲಯದಲ್ಲಿ ನಡೆಯುವ ದಬ್ಬಾಳಿಕೆ, ಭ್ರಷ್ಟಾಚಾರವನ್ನು ಬಯಲಿಗೆಳೆದು ಬರೆದರು.

ಪ್ರಗತಿಶೀಲ ಸಾಹಿತಿಗಳಂತೆ ನವ್ಯ ಸಾಹಿತಿಗಳು ಕೂಡ ಪ್ರತಿಭಟನೆಯ ಮನೋಭಾವವನ್ನೇ ಹೊಂದಿದ್ದರು. ಈ ನವ್ಯ ಸಾಹಿತ್ಯದಿಂದ ಸಾಹಿತಿಗೂ ಮತ್ತು ಓದುಗರ ನಡುವೆ ಅಂತರವನ್ನು ನಿರ್ಮಿಸಿತು. ನವ್ಯ ಸಾಹಿತ್ಯದ ಕೃತಿಗಳು ನವೋದಯ ಮತ್ತು ಪ್ರಗತಿಶೀಲ ಕೃತಿಗಳಿಗಿಂತ ಹೆಚ್ಚು ಶ್ರಮವನ್ನು ಸೂಕ್ಷ್ಮತೆಯನ್ನು ಓದುಗರಿಂದ ಬಯಸುತ್ತದೆ ನವೋದಯ ಮತ್ತು ಪ್ರಗತಿಶೀಲ ಕೃತಿಯನ್ನು ಓದಿದಾಗ ಸಿಗುವ ಅನುಭವ ನವ್ಯ ಕೃತಿಯನ್ನು ಓದಿದಾಗ ಸಿಗಲಿಲ್ಲ ಎಂಬ ವಾದ ಕಂಡುಬರುತ್ತದೆ. ನವೋದಯ ಸಾಹಿತಿಗಳು ತಮ್ಮ ಕೃತಿಯಲ್ಲಿ ಮಾನವ ಸ್ವಭಾವವನ್ನು ಚಿತ್ರಿಸಲಿಲ್ಲ ಎಂಬುದು ನವ್ಯರ ಟೀಕೆ. ಆದರೆ ನವ್ಯ ಕೃತಿಯನ್ನು ಓದಿದಾಗ ವಿವೇಕಾನಂದ, ಸಾಕ್ರೆಟಿಸ್, ಬುದ್ಧ, ಇಂತಹ ವ್ಯಕ್ತಿಗಳಿರುವುದು ಸಾಧ್ಯ ಎಂಬ ಕಲ್ಪನೆ ಬರುವುದಿಲ್ಲ. ನವೋದಯ ಮತ್ತು ಪ್ರಗತಿಶೀಲದವರ ಸಾಹಿತ್ಯ ಮಧ್ಯಮ

ವರ್ಗದವರ ಸಾಹಿತ್ಯವಾದರೆ ನವ್ಯ ಸಾಹಿತ್ಯವು ನಗರದ ಜಾಣರ, ಫ್ರಾಯ್ಡ್, ಯಾಂಗ್, ಡಾರ್ವಿನ್ ಈ ವರ್ಗದವರ ಸಾಹಿತ್ಯವಾಗಿದೆ.

ಪ್ರಸ್ತುತ ನವೋದಯ, ಪ್ರಗತಿಶೀಲ, ನವ್ಯ ಪಂಥಗಳ ಪೂರಕ ಚರ್ಚೆಯನ್ನು ಮಾಡಲಾಗಿದೆ. ನನ್ನ ಸೀಮಿತ ಕಾಲಾವಧಿಯ ಘಟ್ಟ ಈ ಮೂರು ಪಂಥಗಳ ವಿಚಾರಧಾರೆಯನ್ನು ಸಮನ್ವಯವಾಗಿಸಿದ ಕೆಲವು ಪ್ರಮುಖ ಕೃತಿಕಾರರ ಚರ್ಚೆ ಒಳಗೊಳ್ಳುವುದಕ್ಕೆ ಪೂರಕವಾಗಿ ಈ ಚರ್ಚೆ ಮಾಡಲಾಗಿದೆ. ಶ್ರೀರಂಗರ ಸಮಕಾಲೀನ ಪ್ರಪಂಚ ಈ ಮೂರು ಪಂಥಗಳ ವೈಭವೀಕರಣವಾಗಿತ್ತು. ಆ ಕಾಲಕ್ಕೆ ಬಂದ ದೇವುಡು ಅವರ ಅಂತರಂಗ, ವಿನಾಯಕ ಗೋಕಾಕರ ಇಜ್ಜೋಡು, ಶಿವರಾಮಕಾರಂತರ ದೇವದೂತರು, ಚೋಮನದುಡಿ, ಸರಸಮ್ಮನ ಸಮಾಧಿ ಇತ್ಯಾದಿ ಕುವೆಂಪು ಅವರ ಕಾನೂರು ಹೆಗ್ಗಡಿತಿ, ಅನಕೃರವರ ಜೀವನಯಾತ್ರೆ, ಸಂಧ್ಯಾರಾಗ ಮತ್ತು ಆನಂದಕಂದರ ಸುದರ್ಶನ ಮುಂತಾದವು ಹೀಗೆ ಆ ಕಾಲಘಟ್ಟದ ಕಾದಂಬರಿಗಳ ಹಾಗೂ ಕೃತಿಕಾರರ ಮನೋಭೂಮಿಕೆಯನ್ನು ಅಧ್ಯಯನ ಮಾಡುತ್ತಲೇ ಅಂದಿನ ಸಮಕಾಲೀನ ಧ್ಯೇಯ ಧೋರಣೆಯನ್ನು ಅಧ್ಯಯನ ಮಾಡಲಾಗುವುದು.

ನವೋದಯ, ಪ್ರಗತಿಶೀಲ, ನವ್ಯ ಕಾಲಘಟ್ಟಗಳ ಚರ್ಚೆಯ ನಂತರ ಹೇಗೆ ನವೋದಯ ಲೇಖಕರೆನಿಸಿದವರು ವಿಭಿನ್ನ ವೈಚಾರಿಕತೆಯಿಂದ ಹೊಸ ತುಡಿತದಿಂದ ಪ್ರಗತಿಶೀಲರಾದರು ಎಂಬುದನ್ನು ಮನಗಂಡು ಈ ಪ್ರಗತಿಶೀಲ ವಿಚಾರಧಾರೆ ನವ್ಯ ಪಂಥಕ್ಕೆ ಹೇಗೆ ವೇದಿಕೆಯಾಯಿತು ಎಂಬುದನ್ನೂ ಕೆಲವು ಸಮಕಾಲೀನ ಲೇಖಕರ ಸಾಹಿತ್ಯಿಕ ಒಲವು ನಿಲುವುಗಳನ್ನು ವಿಮರ್ಶಾತ್ಮಕವಾಗಿ ಚರ್ಚೆ ಮಾಡುತ್ತ ಅಂದಿನ ವಾಸ್ತವ ಪ್ರಪಂಚವನ್ನು ಕಟ್ಟಿಕೊಡುವುದು ಈ ಅಧ್ಯಯನದ ಆಶಯವಾಗಿದೆ. ಹೇಗೆ ಕಾರಂತರು, ಗೋಕಾರರು, ಕುವೆಂಪು, ಅನಕೃ, ತರಾಸು, ಆನಂದಕಂದರು ನವೋದಯದ ಪ್ರಭಾವದಿಂದಲೇ ಪ್ರಗತಿಶೀಲತೆಯ ದ್ಯೋತಕವಾಗಿ ನವ್ಯ ಪಂಥಕ್ಕೆ ರೂವಾರಿಗಳಾದರು ಎಂಬುದು ಕೂಡಾ ಗಮನೀಯ ಅಂಶವಾಗಿದೆ. ಸಮಕಾಲೀನರ ಚಿಂತನೆಯ ಮೂಲಕ ಶ್ರೀರಂಗರು ನವೋದಯ ಕಾಲಘಟ್ಟದವರೇ ಆದರೂ ಪ್ರಗತಿಶೀಲ ಪಂಥವೆಂದು ನೇರ ಹೇಳಿದೆ ಹೋದರೂ ನವ್ಯತೆಯನ್ನು ಕಂಡುಕೊಂಡರೆಂಬುದನ್ನು ಪ್ರತಿಪಾದಿಸಲಾಗಿದೆ. ಅಂದರೆ ಅವರ ಸಮಕಾಲೀನ ಲೇಖಕರು ಕೂಡಾ ಹೇಗೆ ನವ್ಯಪಂಥವನ್ನು ಪರೋಕ್ಷವಾಗಿ ಬಲಪಡಿಸಿದರು ಎಂಬುದು ಇಲ್ಲಿನ ಚರ್ಚಿತ ವಿಷಯ. ಈ ಮಧ್ಯೆ ಅನಕೃ ಅವರು ಪ್ರಗತಿಶೀಲ ಎಂಬ ಚಳುವಳಿಯನ್ನು ಹುಟ್ಟು ಹಾಕಿದರೂ ಕೂಡ ಅದು ಕೆಲವೇ ದಿನಗಳ ಅಂತರದಲ್ಲಿ ಪರ್ಯಾವಸಾನವಾಯಿತು. ಆದರೆ ಕಾರಂತರು, ಗೋಕಾಕ, ಶ್ರೀರಂಗರು ನವ್ಯ ಮನೋಭೂಮಿಕೆಯನ್ನು ಯಾವ ರೀತಿ ತಮ್ಮಲ್ಲಿ ಆರೋಪಿಸಿಕೊಂಡಿದ್ದರು ಎಂಬುದನ್ನು ಕೂಡಾ ಇಲ್ಲಿ ವಿವೇಚಿಸಲಾಗಿದೆ. ಕಟ್ಟಿಮನಿ, ತರಾಸು, ಅನಕೃ ಇನ್ನು ಮೊದಲಾದವರು ಇದೇ ಕಾಲಘಟ್ಟದ ಅನೇಕ ಲೇಖಕರನ್ನು ಇಲ್ಲಿ ಚರ್ಚೆ ಮಾಡಲಾಗಿದೆ. ಆ ಮೂಲಕ, ಅಂದಿನ ಕೃತಿಕಾರರ ಕೃತಿಗಳನ್ನು ಪರಿಶೀಲಿಸುವುದರ ಮೂಲಕ ಅಂದಿನ ಸಮಾಜದ ವಾಸ್ತವತೆಯನ್ನು ಅಧ್ಯಯನ ಮಾಡುವುದು ಈ ಸಮಕಾಲೀನತೆಯ ಅರ್ಥವ್ಯಾಪ್ತಿ.

ಡಾ.ಸಿ.ಆರ್.ಯರವಿನತೆಲಿಮಠ ಅವರು ಹೇಳುವಂತೆ ಆಧುನಿಕತೆಯ ಜೊತೆಜೊತೆಗೆ ವಾಸ್ತವವಾದ ಕನ್ನಡ ಸಾಹಿತ್ಯ ಪ್ರವೇಶಿಸಿರುತ್ತದೆ. ಅಂದರೆ ನವೋದಯ ಕಾವ್ಯರಚನೆಯ ಕಾಲದಲ್ಲಿ ವಾಸ್ತವವಾದಿ ಕಥಾಸಾಹಿತ್ಯ ಹುಟ್ಟು, ಕಾದಂಬರಿ ಪರಂಪರೆ ಕನ್ನಡದಲ್ಲಿ ಬೆಳೆದದ್ದು ಸ್ಪಷ್ಟವಿರುತ್ತದೆ. ವಾಸ್ತವವಾದಿ ಕಲೆಯ ಎಲ್ಲ ಅಂಶಗಳು ಯಾವುದೇ ಒಂದು ಅಥವಾ ಯಾವುದೇ ಒಬ್ಬಿಬ್ಬರು ಲೇಖಕರ ಕೃತಿಗಳಲ್ಲಿ ಕಾಣಸಿಗುವುದಿಲ್ಲ. ಒಂದೊಂದು ಕೃತಿಯಲ್ಲಿ ಒಬ್ಬೊಬ್ಬ ಲೇಖಕರಲ್ಲಿ ಒಂದೊಂದು ಲಕ್ಷಣವನ್ನು ಗುರುತಿಸಬಹುದಾಗಿದೆ. ಕನ್ನಡದ ಹಿರಿಯ ಕಾದಂಬರಿಕಾರರಾದ ಮಾಸ್ತಿವೆಂಕಟೇಶ ಅಯ್ಯಂಗಾರ, ಶಿವರಾಮ ಕಾರಂತ, ಕುವೆಂಪು, ವಿ.ಕೃ.ಗೋಕಾಕ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮೊದಲಾದವರಲ್ಲಿ ವಾಸ್ತವವಾದದ ದಟ್ಟ ಛಾಯೆಯನ್ನು ಗುರುತಿಸಬಹುದು. ಮಾಸ್ತಿ ಮತ್ತು ಗೊರೂರು ಅವರ ಅನೇಕ ಕಥೆಗಳು ಕಾರಂತರ ಚೋಮನದುಡಿ, ಮರಳಿಮಣ್ಣಿಗೆ, ಕುಡಿಯರ ಕೂಸು, ಬೆಟ್ಟದ ಜೀವ, ಕುವೆಂಪು ಅವರ ಕಾನೂರು ಸುಬ್ಬಮ್ಮ ಹೆಗ್ಗಡಿತಿ, ಗೋಕಾಕರ ಸಮರಸವೇ ಜೀವನ ಮುಂತಾದ ಕೃತಿಗಳಲ್ಲಿ ವಾಸ್ತವವಾದದ ಹೆಗ್ಗುರುತುಗಳನ್ನು ಕಾಣಬಹುದು (ಯರವಿನತೆಲಿಮಠ, ೨೦೦೦, ಪುಟ ೭೧-೭೨). ಈ ಹಿನ್ನೆಲೆಯಲ್ಲಿ ಈ ಎಲ್ಲ ಲೇಖಕರುಗಳ ಕೃತಿಗಳನ್ನು ಪರಾಮರ್ಶಿಸಿ ಅಂದಿನ ವಾಸ್ತವ ಅಂಶಗಳನ್ನು ಅರಿಯುವುದು ಅಧ್ಯಯನದ ಕ್ರಮವಾಗಿದೆ.

೧೯೨೮ರಲ್ಲಿ ಮಾಸ್ತಿರವರ ಸುಬ್ಬಣ್ಣ ಕಾದಂಬರಿ ರಚಿತವಾಯಿತು. ಈ ಕಾಲಘಟ್ಟದಲ್ಲಿಯೇ ಇದು ಮೊದಲನೆಯದು. ಅದಕ್ಕಾಗಿ ಈ ಕಾದಂಬರಿಯನ್ನು ಮೊದಲಿಗೆ ಚರ್ಚೆ ಮಾಡಲಾಗಿದೆ. ಆಧುನಿಕ ಸಂವೇದನೆಗೆ ಒಪ್ಪಿತವಾಗುವ ರೀತಿಯಲ್ಲಿ ಮಾಸ್ತಿರವರು ಸುಬ್ಬಣ್ಣ ಕಾದಂಬರಿಯನ್ನು ಬರೆದಿದ್ದಾರೆ. ಇದು ಸುಬ್ಬಣ್ಣ ಎಂಬ ಒಬ್ಬ ಕಲಾವಿದನ ಕಥೆಯಾಗಿದೆ. ಇಲ್ಲಿ ಮುಖ್ಯ ಪಾತ್ರವಾಗಿ ಸುಬ್ಬಣ್ಣನೇ ಕಾಣುತ್ತಾನೆ. ಇವನು ನಾರಾಯಣಶಾಸ್ತ್ರಿಗಳೆಂಬ ವಿದ್ವಾಂಸರ ಒಬ್ಬನೇ ಮಗ ಸುಬ್ರಹ್ಮಣ್ಯಶಾಸ್ತ್ರಿ ಆಗಬೇಕಾದವನು ಸಂಗೀತದ ಬೆನ್ನು ಹತ್ತಿ ಸುಬ್ಬಣ್ಣ ಆದನು. ಸಂಗೀತ ವಿದ್ವಾಂಸನಾಗಿಯೇ ತೀರಿಹೋದನು. ಮಾಸ್ತಿರವರಲ್ಲಿ ಪ್ರಖರ ವಾಸ್ತವತೆ ಇರದೆ ಅನುಕಂಪ ಬೆರೆತ ವಾಸ್ತವತೆ ಇರುತ್ತದೆ. ಅವರ ಹಾಸ್ಯಕ್ಕೂ ಮಾನವೀಯ ಅನುಕಂಪದ ಕಂಪು ಇರುತ್ತದೆ. ಅನ್ಯ ಭಾಷೆಗಳಿಂದ ವಸ್ತುವನ್ನು ಪಡೆದಿದ್ದರೂ, ಮಾಸ್ತಿಯವರು ಕನ್ನಡ ಜನತೆಯ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಸೋಪಜ್ಞತೆಯನ್ನು ತೋರಿದ್ದಾರೆ. ಅವರು ಮೂಡಿಸಿರುವ ಸಮಕಾಲೀನ ಸಮಾಜದ ಚಿತ್ರ ನೈಜವಿರುತ್ತದೆ. (ಯರವಿನತೆಲಿಮಠ, ೨೦೦೦, ಪುಟ ೭೩)

ಅಲ್ಲದೆ ಗೊರೂರು ಅವರು ಮಾಸ್ತಿಯವರ ಕಥನ ವೈಶಿಷ್ಟ್ಯವನ್ನು ಹೀಗೆ ಹೇಳಿದ್ದಾರೆ. ಆಗ ನವೋದಯ, ಅರುಣೋದಯ, ನವ್ಯ ಯಾವ ಹೆಸರುಗಳು ಇನ್ನು ಪ್ರಯೋಗಕ್ಕೆ ಬಂದಿರಲಿಲ್ಲ. ನಮ್ಮ ಕಣ್ಣೆದುರಿಗೆ ಓಡಾಡುತ್ತಿರುವ ರಂಗ, ವೆಂಕಟಸ್ವಾಮಿ, ರಂಗಸ್ವಾಮಿ, ಬೀದಿಯಲ್ಲಿ ಹೋಗುವ ನಾರಿ, ಜನ ಜೀವನದ ವ್ಯಕ್ತಿಗಳನ್ನು ಮಾಸ್ತಿ ಸಾಹಿತ್ಯಕ್ಕೆ ತಂದಿದ್ದರು. ಆ ಬಗೆಯ ಕಥೆಗಳು, ತಂತ್ರ ಮತ್ತು ವಸ್ತುವಿನಿಂದ ಕನ್ನಡ ಸಾಹಿತ್ಯದಲ್ಲಿ ಹೊಸವಾಗಿದ್ದವು. (ಯರವಿನತೆಲಿಮಠ, ೨೦೦೦, ಪುಟ ೭೩)

ಆನಂದಕಂದರ 'ಸುದರ್ಶನ' ಕಾದಂಬರಿಯು (೧೯೩೩)ರಲ್ಲಿಯೇ ಬರೆಯಲ್ಪಟ್ಟಿತು. ಈ ಕಾದಂಬರಿಯಲ್ಲಿ ಬರುವ ಸುದರ್ಶನ ಕಾದಂಬರಿಯ ಆದರ್ಶನಾಯಕನಾಗಿ, ಉಷೆಯ ಪ್ರಿಯಕರನಾಗಿ ಕೊನೆ ಜನಸೇವೆಯಲ್ಲಿ ಮುಕ್ತಿಯನ್ನು ಕಾಣುವುದು ಇಲ್ಲಿಯ ವಿಷಯವಾಗಿದೆ.

ಇವರ ನಂತರದಲ್ಲಿ ಬರುವ ಇದೇ ಕಾಲಘಟ್ಟದವರಾದ ವಿ.ಕೃ.ಗೋಕಾಕರ 'ಇಜ್ಜೋಡು' ಕಾದಂಬರಿಯು ೧೯೩೧ರಲ್ಲಿ ರಚಿತವಾಯಿತು. ಈ ಕಾದಂಬರಿಯ ಕಥಾ ವಿವರ ಈ ರೀತಿ ಇದೆ. ವಿಷಮ ದಾಂಪತ್ಯದಲ್ಲಿ ಕುಗ್ಗಿ ಹೋದರು ಕೂಡ ಸಹನೆಯಿಂದ ಇರುವ ಪದ್ಮಾವತಿಯ ಕಥೆ ಇದೆ. ಅದರ ಮುಂದುವರಿದ ಭಾಗದಲ್ಲಿ ಅವಳ ತಮ್ಮ ನರಹರಿಯ ಜೀವನವನ್ನು ಎದುರಿಸಿ ವಿಸ್ತರಣೆ ಹೊಂದುವ ಕಥೆ ಇದೆ. ಈ ಕಾದಂಬರಿ ಧಾರವಾಡ ಸೀಮೆಯ ಪ್ರಾದೇಶಿಕ ಸಮಾಜ ಮತ್ತು ಜೀವನಗಳ ತಳಹದಿಯ ಮೇಲೆ ನಿಂತಿರುತ್ತದೆ. ಭಾರತದ ದಕ್ಷಿಣೋತ್ತರಗಳು ಪೂರ್ವ ಪಶ್ಚಿಮ ಭೂಭಾಗಗಳು, ದೇಶ ವಿದೇಶಗಳ ಸಮಾಜ, ಸಂಸ್ಕೃತಿ, ನೀತಿ ನಿಯಮ ಎಲ್ಲವೂ ನಮ್ಮ ಕಣ್ಮುಂದೆ ವಿವರ ವಿವರವಾಗಿ ಹಾಯ್ದು ಹೋಗುತ್ತವೆ. ಇಷ್ಟು ಪಾತ್ರಗಳನ್ನು ಚಿತ್ರಿಸಿರುವ ರೀತಿ ವ್ಯಾಪಕವಾದ ಮಾನವೀಯ ಆಸಕ್ತಿಗೂ ವಾಸ್ತವಿಕತೆಗೂ ಸಾಕ್ಷಿಯಾಗಿದೆ.

ಕಾರಂತರು ಕಾದಂಬರಿಯ ವಸ್ತುವನ್ನು ಬುದ್ಧಿಪೂರ್ವಕವಾಗಿ ತಿದ್ದಿ ಮಾರ್ಪಡಿಸಿ ಯಾವುದೇ ತಂತ್ರ ಅಳವಡಿಸುವದಿಲ್ಲ. ವೈಜ್ಞಾನಿಕತೆಯಿಂದ ಪ್ರಾಮಾಣಿಕತೆಯಿಂದ ಜೀವನವನ್ನು ಅರ್ಥೈಸಿದ್ದಾರೆ. ಅಲ್ಲದೆ ಸಮಕಾಲೀನ ಜೀವನದ ಸಮಸ್ಯೆಗಳನ್ನು ವಾಸ್ತವತೆಯ ನೆಲೆಯಲ್ಲಿ ಗುರುತಿಸಿದ್ದಾರೆ. ಕಾರಂತರು ವಸಾಹತುಶಾಹಿ ತಂತ್ರಗಾರಿಕೆಗೆ ತಮ್ಮ ಪ್ರತಿಭಟನೆಯನ್ನು ತೋರಿದ್ದಾರೆ. ಅಲ್ಲದೆ ಕಲ್ಪನೆಗಿಂತ ವಾಸ್ತವತೆಯನ್ನು ಭಾವನೆಗಿಂತ ವೈಚಾರಿಕತೆಯನ್ನು ಇವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಈ ಕಾಲಘಟ್ಟದಲ್ಲಿ ಬರುವ ಕಾರಂತರ ಕಾದಂಬರಿಗಳನ್ನು ಕುರಿತು ವಿವೇಚನೆ ಮಾಡಲಾಗುತ್ತದೆ. ಕಾರಂತರ ಕಾದಂಬರಿಗಳು ಈ ರೀತಿಯ ಪರಿಸರವನ್ನು ಚರ್ಚಿಸಿದ ಬಗೆ ನಮಗೆ ಮುಖ್ಯವಾಗುತ್ತದೆ. ಇವರ ಕಾದಂಬರಿಯಲ್ಲಿ ಅಂತಃಕರಣ ಪೂರ್ವಕ ಕಳಕಳಿ ಕಂಡುಬರುತ್ತದೆ. ಮತ್ತು ಹೊಸ ಸಮಾಜವನ್ನು ಕಟ್ಟಿ ಬೆಳೆಸುವ ಗುಣ ಅವರ ಅನೇಕ ಕಾದಂಬರಿಯಿಂದ ತಿಳಿದುಬರುತ್ತದೆ. ಇದೇ ರೀತಿಯ ಸಾಮಾಜಿಕ ಕಳಕಳಿಯನ್ನು ಹೊಂದಿದ ಕಾರಂತರ ಮೂರು ಕಾದಂಬರಿಯನ್ನು ಇಲ್ಲಿ ಪರಾಮರ್ಶಿಸಲಾಗಿದೆ. ಅವುಗಳೆಂದರೆ ದೇವದೂತರು, ಸರಸಮ್ಮನ ಸಮಾಧಿ, ಚೋಮನದುಡಿ ಕಾರಂತರ ದೇವದೂತರು ಕಾದಂಬರಿ ೧೯೨೮ರಲ್ಲಿ ರಚಿತವಾದರೂ ಕೂಡ ಇದು ಹಾಸ್ಯ ಮತ್ತು ನಟನೆಗೆ ಮೀಸಲಾದ ಕೃತಿಯಾಗಿದೆ. ಈ ಒಂದು ಕೃತಿಯನ್ನು ಬಿಟ್ಟರೆ ಕಾರಂತರ ಯಾವ ಕೃತಿಯಲ್ಲಿಯೂ ಈ ರೀತಿಯ ಹಾಸ್ಯವನ್ನು ಬಳಸಿಕೊಂಡಿಲ್ಲ. ಒಂದು ದೃಷ್ಟಿಯಿಂದ ವಿಪರೀತವಾದ ಪುರಾಣವನ್ನು ಕಲ್ಪಿಸಿಕೊಂಡು ಅದರ ಮೂಲಕ ಸಮಕಾಲೀನತೆಯ ವಿಕೃತಿಗಳನ್ನು ಟೀಕಿಸುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಇದೇ ಹಾದಿಯನ್ನು ತುಳಿದ ಕಾರಂತರ ಇನ್ನೆರಡು ಕಾದಂಬರಿಗಳು ೧೯೩೩ರಲ್ಲಿ ರಚಿತವಾದ ಚೋಮನದುಡಿ ಮತ್ತು ೧೯೪೮ರಲ್ಲಿ

ರಚಿತವಾದ ಸರಸಮ್ಮನ ಸಮಾಧಿ, ಚೋಮನದುಡಿಯು ಒಂದು ಸಾಮಾಜಿಕ ವ್ಯವಸ್ಥೆಯು ಒಬ್ಬ ವ್ಯಕ್ತಿಯ ಜೀವವನ್ನು ಯಾವ ರೀತಿ ತೆಗೆದುಕೊಳ್ಳುತ್ತದೆ ಎಂಬುದನ್ನು ತಿಳಿಸುತ್ತದೆ. ಜಾತಿ ವೈಷಮ್ಯದ ಮೂಲಕ ಜನರನ್ನು ಮೇಲು ಕೀಳೆಂದು ಭಾವಿಸಿ ಇದ್ದವರ ಹಣ ಇಲ್ಲದವರ ಬದುಕಿನಲ್ಲಿ ತಂದೊಡ್ಡಬಹುದಾದ ಅನಾಹುತಗಳು ಇಲ್ಲಿ ಹೃದಯಾವಿದ್ರಾವಕವಾಗಿ ಕಂಡುಬಂದಿದೆ. ಸರಸಮ್ಮನ ಸಮಾಧಿಯಲ್ಲಿ ದಾಂಪತ್ಯದಲ್ಲಿ ಉಂಟಾಗುವ ದೊಡ್ಡ ಸಮಸ್ಯೆಯನ್ನು ಕುರಿತು ಮನಸ್ಸು ಯಾವ ರೀತಿ ವಿಚಾರ ಮಾಡುತ್ತದೆ ಎನ್ನುವ ಆಶಯದಿಂದ ಮೂಡಿಬಂದ ಕಾದಂಬರಿ ಇದಾಗಿದೆ.

ಈ ಕಾಲಘಟ್ಟದ ಸಮಕಾಲೀನವರೇ ಆದ ಅನಕೃರವರು ಕೂಡಾ ತಮ್ಮ ಕೃತಿಯಲ್ಲಿ ಸಮಾಜದ ಮೌಢ್ಯ ಮತ್ತು ಅಂಧಾನುಕರಣೆಯನ್ನು ಬಯಲಿಗೆಳೆಯಲು ಕಾದಂಬರಿಯನ್ನು ಬರೆದರು. ಅವರು ೧೯೩೪ರಲ್ಲಿ 'ಜೀವನಯಾತ್ರೆ'ಯನ್ನು ೧೯೩೪ರಲ್ಲಿ 'ಉದಯರಾಗ' ಮತ್ತು ೧೯೩೫ರಲ್ಲಿ 'ಸಂಧ್ಯಾರಾಗ'ವನ್ನು ಬರೆದರು. 'ಜೀವನಯಾತ್ರೆ' ಅನಕೃರವರ ಮೊದಲ ಕಾದಂಬರಿ ಇದರ ಕಥಾವಿವರ ಈ ರೀತಿ ಇದೆ. ಒಬ್ಬ ಸಾಮಾನ್ಯ ಬಡ ವೃದ್ಧೆ ಯಾರದೊ ಅನಾಥ ಮಕ್ಕಳನ್ನು ಅತ್ಯಂತ ಕಷ್ಟದಿಂದ ಸಾಕಿದ ದಾರುಣ ವಸ್ತು ಇದರಲ್ಲಿದೆ. ಇದೇ ಕಾಲಘಟ್ಟದ ಉದಯರಾಗ ಕಾದಂಬರಿಯಲ್ಲಿ ಒಬ್ಬ ಚಿತ್ರಕಾರನ ಜೀವನದ ಹೋರಾಟ, ಕಲಾಸಾಧನೆಯನ್ನು ಚಿತ್ರಿಸಿದ್ದಾರೆ. ಅವರ ಮತ್ತೊಂದು ಕಾದಂಬರಿಯಾದ ಸಂಧ್ಯಾರಾಗ ಒಂದು ಪ್ರಾತಿನಿಧಿಕ ಕಾದಂಬರಿಯಾಗಿದೆ. "ಈ ಕಾದಂಬರಿ ಒಬ್ಬ ಸಂಗೀತ ಸಾಧಕನ ಅಂತರಂಗ ವಿಪ್ಲವವನ್ನು ಚಿತ್ರಿಸುತ್ತದೆ. ಕಲಾಪ್ರಗತಿಗೆ ಪ್ರತಿಕೂಲದ ಪರಿಸ್ಥಿತಿಗೆ ಸಿಕ್ಕಿಕೊಂಡು ಲಕ್ಷ್ಮಣ ಅದನ್ನು ದಿಟ್ಟತನದಿಂದ ಎದುರಿಸಿ ಶ್ರೇಷ್ಠ ಗುರುಗಳ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡಿ ಸಿದ್ಧಿ ಪುರುಷನಾಗುವುದು ಕಥಾ ವಸ್ತುವಿನ ಜೀವಾಳವಾಗಿದೆ. ಕಲಾವಿದ ಚಿತ್ರಗಾರನಿರಲಿ, ಗಾಯಕನಿರಲಿ, ಸಾಹಿತಿಯಾಗಿರಲಿ ಜೀವನದ ಸಮನ್ವಯ ಕಡೆಗೆ ಬರುತ್ತಾನೆ. ಮೊದಲು ಯಾವುದು ಭಿನ್ನವೋ ಅದರ ಪೂರ್ಣತೆಯು ಅವನಿಗೆ ಗೋಚರವಾಗುತ್ತದೆ. ಆಗಲೇ ಅವನ ಜೀವನ ಪೂರ್ಣವಾಗುವುದು ಬಾಳು ಸಾರ್ಥಕವಾಗುವುದು. ಅಂತಹ ಆದರ್ಶದ ಕಡೆಗೆ ಸಾಗಿದ ಒಬ್ಬ ಕಲಾವಿದನ ಚಿತ್ರವೇ ಸಂಧ್ಯಾರಾಗ" (ಎಸ್.ಎಸ್.ಭಗವತಿ, ೨೦೦೨, ಪುಟ ೧೫೧) ಪಾಶ್ಚಾತ್ಯ ಸಾಹಿತ್ಯದಿಂದ ಹಾಗೂ ಬಂಗಾಲಿ ಸಾಹಿತ್ಯದಿಂದ ಪ್ರಭಾವಿತರಾದ ಅನಕೃ ಅವರು ಅಪ್ಪಟ ಮಾನವವಾದಿ ಕಾದಂಬರಿಗಳನ್ನು ಬರೆಯದೆ ರಮ್ಯ, ವಾಸ್ತವ, ಪ್ರಗತಿಶೀಲ ಮುಂತಾದ ಅಂಶಗಳನ್ನು ಸೇರಿಸಿ ತಮ್ಮದೇ ಅದ ಸಂಪ್ರದಾಯವನ್ನು ನಿರ್ಮಿಸಿದರು. (ಯರವಿನತೆಲಿಮಠ, ೨೦೦೦, ಪುಟ ೭೫)

ಕುವೆಂಪುರವರು ೧೯೩೬ರಲ್ಲಿ ಬರೆದ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಕಾದಂಬರಿಯು ನಮ್ಮ ಸಮಕಾಲೀನ ಪ್ರಪಂಚಕ್ಕೆ ಹತ್ತಿರವಾಗಿರುವುದರಿಂದ ಇದನ್ನು ಆಯ್ಕೆ ಮಾಡಿಕೊಂಡಿದ್ದೇನೆ. "ಈ ಕಾದಂಬರಿಯಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಸುಬ್ಬಮ್ಮನ ದುರಂತ ಇದು ಪ್ರತ್ಯೇಕವಾಗಿ ಅರ್ಥಪೂರ್ಣತೆಯನ್ನು ಪ್ರಕಟಿಸುತ್ತಲೇ ಇರುವುದರಿಂದ ಕುವೆಂಪುರವರ ಕಾದಂಬರಿಗೂ ಕೂಡಾ ಅನುಭವದ

ವೈಚಾರಿಕ ಮುಖವನ್ನು ಧಿಕ್ಕರಿಸಿ ಹೋಗುವುದಿಲ್ಲ. ಹಿಂದೆ ಹೇಳಿದಂತೆ ಈ ಕಾದಂಬರಿಯ ಯಶಸ್ಸು ಅವುಗಳ ಸಮಗ್ರ ಸಂವಿಧಾನದಲ್ಲಿರದೇ ಬಿಡಿ ಭಾಗಗಳಲ್ಲಿ ಇರುವುದರಿಂದ ಈ ಬಿಡಿ ಭಾಗಗಳು ತಮ್ಮ ಯಶಸ್ಸಿಗೆ ವೈಚಾರಿಕತೆಯನ್ನು ಆಶ್ರಯಿಸಿರುವುದರಿಂದ ಅಪರೋಕ್ಷವಾಗಿ ಇಲ್ಲಿಯೂ ವೈಚಾರಿಕತೆಯ ಅನಿವಾರ್ಯತೆಯೇ ಸ್ಥಾಪಿತವಾಗುತ್ತದೆ." (ಕೋ.ಚನ್ನಬಸಪ್ಪ, ೨೦೦೪, ಪುಟ ೫) ಈ ಕಾದಂಬರಿಯಲ್ಲಿ ಹಳತು ಹೊಸತುಗಳ ಸಂಘರ್ಷ ಸಾಕಷ್ಟು ಸ್ಥಾನವಾಗಿದೆ. ಹಳತು ಹೊಸತು ಸೇರಿದರೆ ಎಂಬ ತಲೆಬರಹವಿರುವ ಭಾಗದಲ್ಲಿ ಚಂದ್ರಯ್ಯಗೌಡ ವೆಂಕಟಪ್ಪಯ್ಯ ಜೋಯಿಸರು ಅನಾಗರಿಕತೆಯ ಸಂಕೇತವಾದ ಮೂಢನಂಬಿಕೆಯನ್ನು ವಿರೋಧಿಸುತ್ತಾನೆ. ಚಂದ್ರಯ್ಯ ಹೂವಯ್ಯನಿಗೆ ತೋರುವ ಭೀತಿ, ಗೌರವ, ಅಸಡ್ಡೆ, ಪ್ರತಿಕ್ರಿಯೆಯೂ ಆಗಿದೆ. ಹೂವಯ್ಯ ರಾಮಯ್ಯರು ನವನಾಗರಿಕತೆಯ ಹರಿಕಾರರಾಗುತ್ತಾರೆ. (ಯರವಿನತೆಲಿಮಠ, ೨೦೦೦, ಪುಟ ೮೦)

ಮೇಲೆ ಚರ್ಚೆಗೆ ಆಯ್ದುಕೊಂಡ ಎಲ್ಲ ಕಾದಂಬರಿಗಳಲ್ಲಿಯೂ ನಾಯಕನೇ ಮುಖ್ಯ ಪಾತ್ರವಾಗಿ ಕಂಡುಬರುತ್ತಾನೆ. ಈ ಎಲ್ಲ ಕಾದಂಬರಿಯ ಪಾತ್ರಗಳು ಸಾಕಷ್ಟು ವೈವಿಧ್ಯವನ್ನು ಪಡೆದಿದ್ದರೂ ಪ್ರತ್ಯೇಕವಾಗಿ ಅವುಗಳ ಬೆಳವಣಿಗೆ ಎಲ್ಲೂ ಕಂಡುಬಂದಿಲ್ಲ.

ಮೇಲೆ ಚರ್ಚೆ ಮಾಡಿದ ಕಾದಂಬರಿಗಳು ಕನ್ನಡದಲ್ಲಿ ಆಕಸ್ಮಿಕವಲ್ಲ. "ಈ ಸಾಹಿತ್ಯ ರೂಪ ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಉಂಟಾದ ಅನೇಕ ಪಲ್ಲಟಗಳ ಪರಿಣಾಮ. ಕೈಗಾರಿಕೀಕರಣ, ಆಧುನಿಕತೆ, ವೈಜ್ಞಾನಿಕ ಚಿಂತನೆ ಮುಂತಾದವು ವಸಾಹತುಶಾಹಿ ಆಡಳಿತದ ಪರಿಣಾಮ ಈ ದೃಷ್ಟಿಯಿಂದ ವಸಾಹತುಸಾಹಿ ಆಡಳಿತವೆಂದು ಯಾವುದನ್ನು ನಾವು ಕರೆಯುತ್ತೇವೆಯೋ ಅದು ಒಂದು ಚಾರಿತ್ರಿಕ ಪಲ್ಲಟದ ಕಾಲವೂ ಹೌದು ಎಂದು ಪಾರ್ಥ ಚಟರ್ಜಿ ಹೇಳುತ್ತಾರೆ."(ಡಾ.ಕೇಶವಶರ್ಮ, ೨೦೦೫, ಪುಟ ೩೧)

ಶಂಕರ ಮೊಕಾಶಿ ಪುಣೇಕರ ಅವರ ಕಾದಂಬರಿಯಾದ 'ಗಂಗವ್ವ ಮತ್ತು ಗಂಗಾಮಾಯಿ'ಯ ಬಗ್ಗೆ ಅನೇಕ ಚರ್ಚೆ ಆಗಿದ್ದರು ನನ್ನ ಕಾಲ ಮಿತಿ ನಿರ್ಬಂಧದಿಂದ ನನ್ನ ಚರ್ಚೆಗೆ ಅದನ್ನು ತೆಗೆದುಕೊಂಡಿಲ್ಲ. ಈ ಮೇಲೆ ಚರ್ಚೆ ಮಾಡಿರುವ ಎಲ್ಲ ಕಾದಂಬರಿಗಳ ವಿಶಿಷ್ಟಾಂಶಗಳನ್ನು ಗಮನಿಸಿದಾಗ ಅವು ಮುಂದೆ ಬರಲಿದ್ದ ಕಾದಂಬರಿ ಪ್ರಕಾರದ ಮೂಲ ದ್ರವ್ಯಗಳನ್ನು ಸ್ಥೂಲವಾಗಿ ಗ್ರಹಿಸಿದಂತೆ ತೋರುತ್ತದೆ. ಈ ಎಲ್ಲ ಕಾದಂಬರಿಕಾರರು ವಾಸ್ತವವಾದಿಗಳೇ, ಪಾಶ್ಚಾತ್ಯ ಶಿಕ್ಷಣ ಪಡೆದವರೇ ಹಾಗೂ ವಸಾಹತು ಪ್ರಭಾವಕ್ಕೆ ಒಳಗಾಗುವ ಪರಿಸರವನನು ಗ್ರಹಿಸಿದವರೇ ಆಗಿರುತ್ತಾರೆ. ಆದರೂ ಇವರೆಲ್ಲರ ಏಕಸೂತ್ರತೆ ವಾಸ್ತವತೆ ಪದಕ್ಕೆ ಅವರು ಕೊಡುವ ಅರ್ಥವ್ಯಾಪ್ತಿ ಮತ್ತು ವ್ಯಾಖ್ಯಾನವನ್ನು ಆಧರಿಸಿರುತ್ತದೆ. ಆದರೆ ಪ್ರಸ್ತುತ ಶ್ರೀರಂಗರು ಒಂದು ವಿಶಿಷ್ಟ ಬಗೆಯಲ್ಲಿ ಇವರೆಲ್ಲರಿಗಿಂತ ಭಿನ್ನವಾಗುತ್ತಾರೆ. ವಾಸ್ತವತೆ ಎಂಬ ಪದಕ್ಕೆ ತಿ.ನಂ.ಶ್ರೀಯರು ಕೊಡುವ ವ್ಯಾಖ್ಯೆ ಜಗತ್ತಿನ ನಕಲು ತೆಗೆಯುವ ಯಾಂತ್ರಿಕ ಪ್ರಯತ್ನಗಳಿಗಿಂತ ಅದರ ಚಲನಶೀಲ ಅಂತರಂಗವನ್ನು ಗ್ರಹಿಸಿ, ರೂಪಿಸುವ ಪ್ರಯತ್ನಗಳು ಹೆಚ್ಚು ಮೌಲಿಕವಾಗಿವೆ.

(ಯರವಿನತೆಲಿಮಠ, ೨೦೦೦, ಪುಟ ೭೧)ಯನ್ನು ಶ್ರೀರಂಗ ವಿಶ್ವಾಮಿತ್ರರ ಸೃಷ್ಟಿ ಕಾದಂಬರಿಗೆ ಅನ್ವಯಿಸಬಹುದಾಗಿದೆ. ಜಗತ್ತಿನ ನಕಲು ತೆಗೆಯುವ ಪ್ರಯತ್ನಕ್ಕಿಂತ ಅಂತರಂಗದ ಚಲನಶೀಲತೆಗೆ ವೈಚಾರಿಕತೆಯನ್ನು ರೂಢಿಸುವ ಪ್ರಯತ್ನ ಇಲ್ಲಿ ಕಂಡುಬರುತ್ತದೆ.

ಶ್ರೀರಂಗರು ನವೋದಯದ ಪರಿಪ್ರೇಕ್ಷದಲ್ಲಿದ್ದರೂ ಕೂಡಾ ಪ್ರಗತಿಶೀಲರ ವಿಚಾರವನ್ನು ತಮ್ಮಲ್ಲೇ ಗ್ರಹಿಸಿಕೊಂಡು ದಶಕಗಳಷ್ಟು ಆಚೆಯ ವಿಚಾರವನ್ನು ೧೯೩೦ರಲ್ಲಿ ಅವರ ಮೊದಲ ಕಾದಂಬರಿಯಾದ 'ವಿಶ್ವಾಮಿತ್ರನ ಸೃಷ್ಟಿ'ಯಲ್ಲಿ ಕೊಟ್ಟರು. ಈ ರೀತಿ ಒಂದು ಮಹತ್ವಪೂರ್ಣ ಹಿನ್ನೆಲೆ ಈ ಕಾದಂಬರಿಗೆ ಇದೆ. ಶಿವರಾಮಕಾರಂತ, ವಿ.ಕೃ.ಗೋಕಾಕ, ದೇವುಡು ಇವರ ಮನೋವೈಜ್ಞಾನಿಕ ಅಂಶವನ್ನು ಪ್ರತಿಪಾದಿಸಿದ ಬಗೆಗಿಂತ ಶ್ರೀರಂಗರು ಭಿನ್ನರಾಗುತ್ತಾರೆ. ಈ ಎಲ್ಲಾ ಸಮಕಾಲೀನರು ವಿಭಿನ್ನ ಧೋರಣೆಯಿಂದ ನವ್ಯವನ್ನು ಪ್ರತಿಪಾದಿಸಿರುವಲ್ಲಿ ಒಂದು ವೈಶಿಷ್ಟ್ಯ ಕಾಣುತ್ತದೆ. ಅದು ಶ್ರೀರಂಗರಲ್ಲಿ ಒಂದು ಹೆಜ್ಜೆ ಮುಂದೆ ಹೋಗಿರುವುದನ್ನು ಅವರ ಕಾದಂಬರಿಯ ಮೂಲಕ ಕಾಣಬಹುದು. ನವ್ಯರಲ್ಲಿ ಕಂಡುಬರುವ ಪ್ರಜ್ಞಾಪ್ರವಾಹ ತಂತ್ರ ಶ್ರೀರಂಗರು ಬಳಸಿರುವುದು ಅವರ ಹಿರಿತನಕ್ಕೆ ಕಾರಣವಾಗಿದೆ. ಪ್ರಗತಿಶೀಲರ ಹಾದಿಯಲ್ಲಿ ಇದ್ದರೂ ಕೂಡಾ ನವ್ಯತೆಯ ಅಂಶವನ್ನು ಶ್ರೀರಂಗರು ಅವರ ಕಾದಂಬರಿಯಲ್ಲಿ ಬಳಸಿರುವುದು ಎಲ್ಲಕ್ಕಿಂತ ಭಿನ್ನವಾಗಿದೆ.

ಚಿತ್ತಾಲರ 'ಶಿಕಾರಿ' ಕಾದಂಬರಿಯಲ್ಲಿ ಕೂಡ ಶ್ರೀರಂಗರ 'ವಿಶ್ವಾಮಿತ್ರಸೃಷ್ಟಿ' ಕಾದಂಬರಿಯ ಕೆಲ ಅಂಶಗಳನ್ನು ಗುರುತಿಸಬಹುದಾಗಿದೆ. ಇಂತಹ ಒಂದು ಅದ್ಭುತ ಕಾದಂಬರಿಯ ಜನಕ ಶ್ರೀರಂಗರು. ಅನಕೃ ಅವರ ಕಾದಂಬರಿಗಳು ವಾಸ್ತವ ಚಿತ್ರಣದಲ್ಲಿಯೇ ಮುಳುಗಿದ್ದವು. ವಾಸ್ತವತೆಯನ್ನು ಬಿಟ್ಟು ಆಧುನಿಕತೆಯತ್ತ ಚಲಿಸುವುದನ್ನು ನಾವು ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿಯಲ್ಲಿ ಕಾಣಬಹುದು. ಗೋಕಾಕರಲ್ಲಿ ನವ್ಯದ ಅಂಶ ಕಂಡುಬಂದರು. ಶ್ರೀರಂಗರ ವೈಚಾರಿಕತೆ ಹಾಗೂ ಪ್ರಜ್ಞಾಪ್ರವಾಹ ತಂತ್ರಗಳಂತಹ ಅಂಶಗಳು ಅವರನ್ನು ಈ ಒಂದು ಸಮಕಾಲೀನತೆಯಿಂದ ವಿಭಿನ್ನವಾಗಿ ನೋಡಲು ಕಾರಣವಾಗುತ್ತದೆ.

ಗಿರಡ್ಡಿ ಗೋವಿಂದರಾಜರು ತಮ್ಮ 'ಕಾದಂಬರಿ ವಸ್ತು ಮತ್ತು ತಂತ್ರ' ಎಂಬ ಪುಸ್ತಕದಲ್ಲಿ ಕಾದಂಬರಿ ಮುಖ್ಯವಾಗಿ ಎರಡು ರೀತಿಯದಾಗಿರುತ್ತದೆ ಎಂದು ಹೇಳಿದ್ದಾರೆ. ಮೊದಲನೆಯದಾಗಿ ಲೇಖಕನೇ ನೇರವಾಗಿ ಕಥೆಯನ್ನು ಹೊರಗಿನಿಂದ ಹೇಳಬಹುದು. ಕಾದಂಬರಿಯ ವಸ್ತು, ಪಾತ್ರ ಘಟನೆಗಳೆಲ್ಲ ಅವನ ಸೃಷ್ಟಿಯೇ ಆದ್ದರಿಂದ ಅವೆಲ್ಲವುಗಳ ಸಂಪೂರ್ಣ ಜ್ಞಾನದಿಂದ ಅವನು ಬರೆಯುತ್ತಾನೆ. ಇದು ರಾಜಮಾರ್ಗ, ವಸ್ತುವಿನ ಹರವು, ವೈವಿಧ್ಯ ಹೆಚ್ಚಾಗಿದ್ದಾಗ ಈ ಬಗೆಯ ನಿರೂಪಣೆ ಅನಿವಾರ್ಯವಾಗುತ್ತದೆ. ನಾವು ಓದುವ ಬಹುಪಾಲು ಕಾದಂಬರಿಗಳೆಲ್ಲ ಈ ರೀತಿಯಲ್ಲಿ ಆಗಿದೆ.

ಎರಡನೆಯದಾಗಿ, ಲೇಖಕ ಕಥೆಯನ್ನು ಯಾವುದಾದರೂ ಒಂದು ಪಾತ್ರದ ದೃಷ್ಟಿಕೋನದ ಮೂಲಕ ಒಳಗಿನಿಂದ ಆತ್ಮಕಥನದ ರೀತಿಯಲ್ಲಿ ನಿರೂಪಿಸಬಹುದು. ವೈಯಕ್ತಿಕ ಸಮಸ್ಯೆ, ಆಧ್ಯಾತ್ಮಿಕ

ನೈತಿಕ ಘರ್ಷಣೆ, ತಪ್ಪೊಪ್ಪಿಗೆ ಆತ್ಮಶೋಧನೆಗಳಂಥ ವಿಷಯಗಳಿಗೆ ಈ ವಿಧಾನ ಹೆಚ್ಚು ಸೂಕ್ತವಾದುದು. (ಗಿರಡ್ಡಿ ಗೋವಿಂದರಾಜ, ೧೯೮೭, ಪುಟ ೧೬) ಈ ಎರಡನೆಯ ರೀತಿಯನ್ನು ನಾವು ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿಯಲ್ಲಿ ಇರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಶ್ರೀರಂಗರ 'ವಿಶ್ವಾಮಿತ್ರನ ಸೃಷ್ಟಿ' ರಚನೆ ಸಮಕಾಲೀನ ಅಂಶಗಳನ್ನು ರೂಢಿಸಿಕೊಂಡರೂ ಅವೆಲ್ಲಕ್ಕಿಂತ ಭಿನ್ನವಾದ ಮುಂದಿನ ಹೊಸ ಪಂಥದ ತೋರುಗಲ್ಲಾಗಿ ಇಲ್ಲವೇ ಒಂದು ಮಹತ್ವದ ತಿರುವನ್ನು ಕೊಟ್ಟಂತಹ ವಿಶಿಷ್ಟ ಕಾದಂಬರಿಯೆನಿಸಿದೆ. ಸಮಕಾಲೀನ ಕಾದಂಬರಿಗಳ ಚರ್ಚೆಯ ಮೂಲಕ ಸಮಕಾಲೀನ ಸಾಹಿತ್ಯದ ಮೂಲ ದೃಶ್ಯವನ್ನು ನಾವು ಶ್ರೀರಂಗರ ಕಾದಂಬರಿಯಲ್ಲಿ ಗುರುತಿಸಬಹುದಾದರೂ ಆ ಪರಿಸರಕ್ಕೆ ಹೊಸ ಅನ್ವೇಷಣೆಯ ದಿಕ್ಕನ್ನು ಈ ಕಾದಂಬರಿ ಚಿತ್ರಿಸುತ್ತದೆ. ಆ ಮೂಲಕ ಹೊಸ ಮಂಥನವೊಂದನ್ನು ಹುಟ್ಟು ಹಾಕುತ್ತದೆ ಎಂಬ ಅಂಶವನ್ನು ಹೇಳಲೇಬೇಕಾಗುತ್ತದೆ. ವಿಶ್ವಾಮಿತ್ರ ಸೃಷ್ಟಿಯಂತಹ ಕಾದಂಬರಿಯ ಉಪಯೋಗವನ್ನು ನಮ್ಮ ಲೇಖಕರು ಗಮನಿಸದಿರುವುದು ತುಂಬಾ ಆಶ್ಚರ್ಯವನ್ನುಂಟು ಮಾಡುತ್ತದೆ ಎಂದು ಗಿರಡ್ಡಿಗೋವಿಂದರಾಜ ಅವರು ಹೇಳುವ ಮಾತು ಈ ಚರ್ಚೆಗೆ ಸಮರ್ಥನೆಯನ್ನು ಒದಗಿಸುತ್ತದೆ.

# ೪. ವಿಶ್ವಾಮಿತ್ರಸೃಷ್ಟಿ ವಿವಿಧ ದೃಷ್ಟಿಕೋನಗಳು

೪.೧ ವಿಶ್ವಾಮಿತ್ರ ಸೃಷ್ಟಿಯ ಇತಿವೃತ್ತ

೪.೨ ವಿಶ್ವಾಮಿತ್ರ ಸೃಷ್ಟಿಯ ಆಶಯ ಮತ್ತು ಆಕೃತಿ

೪.೩ ವಿಶ್ವಾಮಿತ್ರ ಸೃಷ್ಟಿಯ ಪಾತ್ರ ವೈವಿಧ್ಯ

೪.೪ ವಿಶ್ವಾಮಿತ್ರ ಸೃಷ್ಟಿಯ ಭಾಷೆ ಮತ್ತು ಶೈಲಿ

# ೪. ವಿಶ್ವಾಮಿತ್ರಸೃಷ್ಟಿ ವಿವಿಧ ದೃಷ್ಟಿಕೋನಗಳು

## ೪.೧. ವಿಶ್ವಾಮಿತ್ರ ಸೃಷ್ಟಿಯ ಇತಿವೃತ್ತ

ಶ್ರೀರಂಗರ 'ವಿಶ್ವಾಮಿತ್ರಸೃಷ್ಟಿ' ಪ್ರಕಟವಾದದ್ದು ೧೯೩೪ರಲ್ಲಿ ಈ ಕಾದಂಬರಿ ಸಾಮಾಜಿಕ ಹಿನ್ನೆಲೆಯಲ್ಲಿ ಮೂಡಿ ಬಂದ ಕಾದಂಬರಿಯಾಗಿದೆ. ಇಪ್ಪತ್ತನೆಯ ಶತಮಾನದ ಆಧುನಿಕ ಸಮಾಜವೇ ಈ ಕಾದಂಬರಿಯ ವಸ್ತುವಾಗಿದೆ. ಈ ವಿಶ್ವಾಮಿತ್ರಸೃಷ್ಟಿ ಕಾದಂಬರಿ ಕುರಿತು ಸಾಹಿತ್ಯದಲ್ಲಿ ಅಲ್ಪಸ್ವಲ್ಪ ಚರ್ಚೆ ನಡೆದಿದೆಯಾದರೂ ಕೂಡ ಸಮಗ್ರ ಚಿಂತನೆ ಈ ವರೆಗೂ ಆಗಿಲ್ಲ. ಈ ಕಾದಂಬರಿ ಓದುಗರಿಗೆ ಗೊಂದಲಗೆಡಿಸುವ ಕೃತಿಯಾಗಿ ಕಂಡುಬಂದಿದೆ. ಶ್ರೀರಂಗರು ಈ ಕಾದಂಬರಿಯಲ್ಲಿ ವ್ಯಕ್ತಿಪ್ರಜ್ಞೆಯನ್ನು ಕೇಂದ್ರವಾಗಿರಿಸಿಕೊಂಡು, ಸೃಷ್ಟಿಸಿದ ಪಾತ್ರದ ಮೂಲಕ ಬಿಡಿಸಿ ತೋರಿಸುವ ರೀತಿ, ವಿನೋದ, ಬುದ್ಧಿಯ ವಿಲಾಸ, ಆಡುನುಡಿಯ ಬಳಕೆ ಇವೆಲ್ಲವನ್ನು ನಾವಿಲ್ಲಿ ಕಾಣಬಹುದಾಗಿದೆ.

ಈ ವಿಶ್ವಾಮಿತ್ರಸೃಷ್ಟಿ ಕಥೆ ಪ್ರಾರಂಭವಾಗುವುದೇ ರೈಲಿನ ಥರ್ಡಕ್ಲಾಸ್ ಕಂಪಾರ್ಟಮೆಂಟಿನಲ್ಲಿ ಸಣ್ಣೂರಿನ ಮನೆತನಕ್ಕೆ ಸೇರಿದ ನಾರಾಯಣ ೨೩ ವರ್ಷದ ಒಬ್ಬ ಶಿಕ್ಷಿತ ಇಂಗ್ಲೀಷ್ ಶಿಕ್ಷಣ ಪಡೆದ ತರುಣ. ತನ್ನ ಇಚ್ಛೆಗೆ ವಿರುದ್ಧವಾಗಿ ನಡೆದ ಮದುವೆಯ ಹಂದರದಿಂದ ಅವನು ಗೊತ್ತು ಗುರಿಯಿಲ್ಲದೆ ಓಡಿ ಬಂದು ರೈಲಿನಲ್ಲಿ ಪ್ರವಾಸ ಕೈಗೊಂಡನು. ಅಲ್ಲಿ ಅವನು ತನ್ನ ಸುತ್ತಲೂ ವಿಚಿತ್ರವಾದ ಪ್ರಪಂಚವೊಂದನ್ನು ಕಾಣುತ್ತಾನೆ. ಅಲ್ಲಿ ಆ ಜನರ ರೀತಿ-ನೀತಿಗಳು ಮಾತುಕತೆಗಳು, ವಿನೋದ, ಕಲಹ, ಕುಹುಕ, ಅಜ್ಞಾನ ಇವುಗಳನ್ನೆಲ್ಲ ನೋಡಿ ನಾರಾಯಣನ ಮನಸ್ಸು ರೋಸಿ ಹೋಗುತ್ತದೆ. ಆ ರೈಲಿನಲ್ಲಿಯ ಅನಕ್ಷರಸ್ಥ ಜನರು ಟಿಕೇಟ್ ಅಧಿಕಾರಿ ಟಿಕೇಟ್ ಕೇಳಲು ಬಂದಾಗ ಹುಲಿ ಬಂದಂತೆ ಆಡುತ್ತಿದ್ದರು. ಇದನ್ನು ಕಂಡ ನಾರಾಯಣ ಹಾಗೆಯೇ ನೋಡತೊಡಗಿದನು. ಅಲ್ಲಿಯೇ ಮತ್ತೊಂದು ಬಗೆಯ ಜನರನ್ನು ಕೂಡಾ ನೋಡಿದ ಅದು ಏನೆಂದರೆ ರೈಲಿನಲ್ಲಿ ಒಬ್ಬ ಅಜ್ಜ ತನ್ನ ಮೊಮ್ಮಗನ ಜೊತೆ ಬಂದಿದ್ದ ಆಗ ಟಿಕೇಟ್ ಅಧಿಕಾರಿ ಟಿಕೇಟ್ ಕೇಳಲು ಬಂದಾಗ ತನ್ನ ಮೊಮ್ಮಗ ಇನ್ನು ಚಿಕ್ಕವನು ಅವನಿಗೆ ಟಿಕೇಟ್ ತೆಗೆದುಕೊಳ್ಳುವುದಿಲ್ಲ ಎಂದು ದಬಾಯಿಸುತ್ತಾನೆ. ಆಗ ನಾರಾಯಣನಿಗೆ ಅಂತಹ

ಜನರನ್ನು ನೋಡಿ ಅಸಹ್ಯವಾಗುತ್ತದೆ. ಏನಪ್ಪ ಈ ೧೨-೧೩ ವರ್ಷದ ಹುಡುಗನಿಗೆ ಟಿಕೇಟ್ ತೆಗೆದುಕೊಳ್ಳುವುದಿಲ್ಲ ಎಂದು ಅಧಿಕಾರಿಗೆ ದಬಾಯಿಸಿದನಲ್ಲ ಎಂದು ಆಶ್ಚರ್ಯಚಕಿತನಾಗಿ ನೋಡತೊಡಗಿದನು. ನಾರಾಯಣ ಇದನ್ನೆಲ್ಲಾ ನೋಡಿ ಜನರ ಅಜ್ಞಾನವನ್ನು ನೋಡಿ ಸಮಾಜ ಸುಧಾರಣೆಯ ಕಾರ್ಯ ಕೈಗೊಳ್ಳಬೇಕೆಂದು ತೀರ್ಮಾನಿಸಿದನು. ಸಮಾಜ ಸುಧಾರಣೆಯನ್ನು ಮುಂದೆ ಬರುವ ಹಳ್ಳಿಯಲ್ಲಿಯೇ ಕೈಗೊಳ್ಳಬೇಕೆಂದು ತೀರ್ಮಾನಿಸಿ ಮುಂದಿನ ಸ್ಟೇಶನ್ನಿನಲ್ಲಿ ಇಳಿದನು. ಅಲ್ಲಿ ಒಂದು ಹೋಟೆಲಿಗೆ ಹೋಗಿ ಚಹಾ ಮತ್ತು ತಿಂಡಿ ಸೇವಿಸುತ್ತಿದ್ದನು. ಅವನು ಸುಧಾರಣೆಯ ವಿಷಯಕವಾಗಿ ಮಾಲಿಕನ ಜೊತೆ ಮಾತನಾಡತೊಡಗಿದನು. ಇದನ್ನು ಕಂಡ ಮಾಲಿಕ ಮತ್ತು ಹಳ್ಳಿಯ ಜನ ದೊಡ್ಡ ಸುಧಾರಣಾ ಅಧಿಕಾರಿ ಬಂದಿದ್ದಾನೆ ಅವನನ್ನು ಊರಿಂದ ಓಡಿಸಬೇಕೆಂದು ತೀರ್ಮಾನಿಸತೊಡಗಿದರು. ನಂತರ ನಾರಾಯಣ ಮಾಲಿಕನ ಹತ್ತಿರ ಬಂದು ನಾನು ಯಾವ ಅಧಿಕಾರಿಯು ಅಲ್ಲ. ಇಲ್ಲಿಯ ಜನರ ಅಜ್ಞಾನವನ್ನು ಕಂಡು ಸಮಾಜ ಸುಧಾರಣೆ ಮಾಡಬೇಕೆಂದು ಬಂದಿದ್ದೇನೆ. ಈ ಸಮಾಜ ಸುಧಾರಣೆ ಮಾಡಬೇಕಾದರೆ ಹಣ ಬೇಕಾಗುತ್ತದೆ ಅದಕ್ಕಾಗಿ ನಿಮ್ಮ ಹೋಟೆಲಿನಲ್ಲಿ ಒಂದು ಕೆಲಸ ಕೊಡಿ ಎಂದು ಕಮತೂರಿನ ಹೋಟೆಲ್ ಮಾಲಿಕನಿಗೆ ಹೇಳಿದನು. ಅಷ್ಟೇ ಅಲ್ಲದೆ ತಪ್ಪು ಮಾಡಿದವರಿಗೆ ಕಠಿಣ ಶಿಕ್ಷೆ ಕೊಡುವ ಬದಲು ೬ ತಿಂಗಳುಗಳ ಕಾಲ ಶಿಕ್ಷಣ ಕೊಟ್ಟರೆ ಯಾರು ಯಾರಿಗೂ ಹೆದರುವ ಪ್ರಸಂಗ ಬರುವುದಿಲ್ಲ. ಇದನ್ನು ಮೇಲಿನ ಅಧಿಕಾರಿಗೆ ತಿಳುಹಿಸಬೇಕೆಂದು ತೀರ್ಮಾನಿಸಿದನು. ಅಷ್ಟೇ ಅಲ್ಲದೆ ಆ ರೈಲಿನಲ್ಲಿ ಆದ ಅನುಭವವನ್ನು ನೆನಪಿಸಿಕೊಳ್ಳತೊಡಗಿದನು. ಆ ರೈಲಿನ ಅಧಿಕಾರಿ ಅಲ್ಲಿಯ ಮುಗ್ಧರನ್ನು ಹೆದರಿಸುತ್ತಿದ್ದ ಅದೇ ಅಲ್ಲಿಗೆ ಬಂದ ಒಬ್ಬ ಅವನ ದಾಷ್ಟ್ಯ ವ್ಯಕ್ತಿಯನ್ನು ಕಂಡು ದಾಷ್ಟ್ಯವನ್ನು ಕಂಡು ಹೆದರಿದರಲ್ಲ ಎಂದು ಹೇಳಿ ಎಲ್ಲರನ್ನು ದಾಷ್ಟ್ಯರನ್ನಾಗಿ ಮಾಡಬೇಕೆನ್ನುವ ಆಸೆಯಿಂದ ಒಂದು ವ್ಯಾಯಾಮ ಶಾಲೆಯನ್ನು ಸ್ಥಾಪಿಸಿಬೇಕೆಂದು ತೀರ್ಮಾನಿಸಿದನು. ಅದಕ್ಕಾಗಿ ಅವನು ಒಂದು ಕಮತೂರಿನ ಹೋಟೆಲೊಂದರಲ್ಲಿ ಕೆಲಸಕ್ಕೆ ಸೇರಿದನು ಅಲ್ಲಿ ಅವನಿಗೆ ತುಳಜಿ ಎಂಬ ಮಹಿಳೆಯ ಪರಿಚಯವಾಗುತ್ತದೆ. ಅವನ ತಂದೆಯ ಗೆಳೆಯ ಹಾಗೂ ಕಮತೂರಿನ ಶ್ಯಾನುಭೋಗ, ಕುಲಕರ್ಣಿ ರಂಗಣ್ಣ, ನಾರಾಯಣ ಕಮತೂರಿಗೆ ಬಂದ ವಿಷಯವನ್ನು ಅವನ ತಂದೆಯಾದ ಶ್ರೀನಿವಾಸ ನಾಯಕನಿಗೆ ತಿಳಿಸುತ್ತಾರೆ. ಕಮತೂರಿನ ತುಳಜಿ ಕುಲಕರ್ಣಿಯ ಮಗಳು ಆದರೆ ಕುಲಕರ್ಣಿಯಿಂದ ಯಾವ ಸಹಾಯವನ್ನು ತೆಗೆದುಕೊಳ್ಳದ ಮಹಿಳೆ ಅವಳು ಕೂಡಾ ಉಪ್ಪುಟ್ಟಿನ ಅಂಗಡಿಯಲ್ಲಿ ಕೆಲಸಕ್ಕೆ ಸೇರಿದ್ದಳು. ಅವಳ ಕಥೆಯನ್ನೆಲ್ಲ ಕೇಳಿದ ನಾರಾಯಣನಿಗೆ ಅವಳ ಮೇಲೆ ಕನಿಕರ ಹುಟ್ಟಿತು ಅವಳಿಗೆ ಹೇಗಾದರೂ ಮಾಡಿ ನ್ಯಾಯ ದೊರಕಿಸಿಬೇಕೆಂಬುದು ಅವನ ಹಟವಾಗಿತ್ತು ನಾರಾಯಣ ಮತ್ತು ತುಳಜಿಯ ಸಲುಗೆಯನ್ನು ಕಂಡ ಕಮತೂರಿನ ಜನ ಅವರ ನಡುವೆ ಸಂಬಂಧವನ್ನು ಕಲ್ಪಿಸತೊಡಗಿದರು. ತುಳಜಿಗೆ ಸಹಾಯ ಮಾಡಬೇಕೆಂಬುದು ನಾರಾಯಣ ಹೋಟೆಲಿನ ಮಾಲಿಕನ ಹತ್ತಿರ ಸಂಬಳ ಕೇಳುತ್ತಾನೆ. ಆದರೆ ಹೋಟೆಲ್ ಮಾಲಿಕ ಅವನಿಗೆ ಸಂಬಳ ಕೊಡದೇ ಅವನನ್ನು ಸತಾಯಿಸುತ್ತಿದ್ದ. ನಾನೇನು ನಿಮಗೆ ನಿಮ್ಮ

ಹಣ ಕೇಳುತ್ತಿಲ್ಲ ನಾನು ದುಡಿದದ್ದಕ್ಕೆ ಪ್ರತಿಫಲವಾಗಿ ನನ್ನ ಸಂಬಳ ಕೇಳುತ್ತಿದ್ದೇನೆ. ಆ ಹಕ್ಕು ನನಗಿದೆ ಎಂದು ನಾರಾಯಣ ಹೇಳಿದ ಆದರೂ ಹೋಟೆಲ್ ಮಾಲಿಕ ಸಂಬಳ ಕೊಡಲು ಒಪ್ಪಲಿಲ್ಲ. ಆಗ ತುಳಜಿ ಬಂದು ಮಾಲಿಕನನ್ನು ಬೈಯತೊಡಗಿದಳು. ನಂತರ ಮಾಲಿಕ ತುಳಜಿಗೆ ಹೆದರಿ ಸಂಬಳ ಕೊಡಲು ಒಪ್ಪಿದನು. ಆದರೆ ನಾರಾಯಣ ಮತ್ತು ತುಳಜಿಯ ಸಂಬಂಧದ ಬಗ್ಗೆ ಜನರು ಮಾತನಾಡತೊಡಗಿದರು. ನಂತರ ಹೋಟೆಲಿನ ಕೆಲಸವನ್ನು ಬಿಟ್ಟು ಮಕ್ಕಳಿಗೆ ಪಾಠ ಹೇಳಿಕೊಡುವ ಕೆಲಸಕ್ಕೆ ಕೈಹಾಕಿದನು. ಮತ್ತು ಆ ಕಮತೂರಿನ ಜನರಿಗೆ ಆದೇಶ ಹೊರಡಿಸಿದನು. ನಾನು ಮಕ್ಕಳಿಗೆ ಪಾಠ ಹೇಳಿಕೊಟ್ಟರೆ ಅದಕ್ಕೆ ಪ್ರತಿಫಲವಾಗಿ ಎರಡು ಹೊತ್ತಿನ ಊಟ ಹಾಕಬೇಕು ಎಂದನು. ಅದಕ್ಕೆ ಕಮತೂರಿನ ಜನರು ಕೂಡಾ ಒಪ್ಪಿದರು. ನಂತರದ ದಿನದಲ್ಲಿ ಅವನು ಕಮತೂರಿನ ಕುಲಕರ್ಣಿಯ ಮನೆಯಲ್ಲಿಯೇ ಊಟ ಮಾಡತೊಡಗಿದನು. ಅವರ ಮನೆಯ ಊಟದ ಅಸ್ತವ್ಯಸ್ಥತೆಯನ್ನು ಕಂಡು ಇನ್ನೊಮ್ಮೆ ಅವರ ಮನೆಯಲ್ಲಿ ಊಟ ಮಾಡಬಾರದೆಂದು ನಾರಾಯಣನು ತೀರ್ಮಾನಿಸಿದನು. ಹೀಗೆ ಸ್ವಲ್ಪ ದಿನ ಕಳೆದ ಮೇಲೆ ನಾರಾಯಣನ ತಂದೆ ಶ್ರೀನಿವಾಸ ನಾಯಕ ಮತ್ತು ಅವನ ಮಾವ ಕುಲಕರ್ಣಿಯ ಮನೆಗೆ ಬಂದರು. ನಾರಾಯಣನು ಹೋಟೆಲಿನ ಕೆಲಸ ಬಿಟ್ಟಿದ್ದು ಮದುವೆ ಮಾಡಿಕೊಂಡ ಹೆಂಡತಿಯನ್ನು ಬಿಟ್ಟು ಬೇರೆಯವರ ಜೊತೆ ಅನೈತಿಕ ಸಂಬಂಧ ಕಲ್ಪಿಸಿಕೊಳುವುದು ಒಳ್ಳೆಯದಲ್ಲ ಎಂದು ಕುಲಕರ್ಣಿ ನಾರಾಯಣನಿಗೆ ಹೇಳಿದೆ. ಶ್ರೀನಿವಾಸ ನಾಯಕ ಹಾಗೂ ಕೃಷ್ಣಾಚಾರಿ ಕಮತೂರಿಗೆ ಬಂದು ಮನೆಗೆ ಮರಳಲು ನಾರಾಯಣನನ್ನು ಒಲಿಸಲು ವಿಫಲ ಪ್ರಯತ್ನ ನಡೆಸುತ್ತಾರೆ. ತುಳಜಿ ತನ್ನ ಅನೈತಿಕ ಸಂಬಂಧದ ಮಗಳು ಎಂದು ನಾರಾಯಣನಿಗೆ ತಿಳಿದು ಬಂದಿರುವುದರಿಂದ ಅವನ ವಿಷಯಕವಾದ ಹೆದರಿಕೆ ರಂಗಣ್ಣನಲ್ಲಿತ್ತು.

ನಾರಾಯಣನು ಸಮಾಜ ಸುಧಾರಣೆ ಮಾಡಬೇಕೆಂದು ಏನೇನು ಕೆಲಸ ಕೈಗೊಂಡನು ಅವೆಲ್ಲವನ್ನು ಬಿಟ್ಟ ನಂತರದ ದಿನದಲ್ಲಿ ರಂಗಣ್ಣ ಅವನನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳಬೇಕೆಂದು ಅವನಿಗೆ ತನ್ನ ತೋಟದಲ್ಲಿ ನಿವಾಸ ಕಲ್ಪಿಸಿಕೊಟ್ಟನು. ಅವನೊಬ್ಬ 'ಯತಿ' ಎನ್ನುವ ಭ್ರಮೆಯನ್ನು ಹಳ್ಳಿಯ ಜನರಿಗೆ ರಂಗಣ್ಣ ಕಲ್ಪಿಸಿದನು. ಅವನ ಹಾಗೂ ಅವನ ಪರಿವಾರದ ಉದರಂಭರಣದ ವ್ಯವಸ್ಥೆ ಮಾಡುತ್ತಾನೆ. ಆದರೆ ಹಳ್ಳಿಯ ಜನ ಯತಿಯಿಂದ ಪವಾಡವನ್ನು ಅಪೇಕ್ಷಿಸುತ್ತಾರೆ. ನಾರಾಯಣನು ಜನರು ತಂದುಕೊಟ್ಟ ತೆಂಗಿನಕಾಯಿಯಿಂದ ತಲೆಗೆ ಘಟ್ಟಿಸಿಕೊಂಡಾಗ 'ಧೋ ಧೋ' ಎಂದು ಮಳೆ ಸುರಿದು ಬಿಡುತ್ತದೆ. ಅದನ್ನೇ ಒಂದು ಪವಾಡವೆಂದು ಹಳ್ಳಿಯ ಜನರು ನಂಬಿ ಅವನನ್ನು ಹೊಗಳುತ್ತಾರೆ. ನಂತರ ನಾರಾಯಣನು ಕಮತೂರನ್ನು ಬಿಟ್ಟು ನಂತರ ನಾಟಕ ಕಂಪನಿಯೊಂದರಲ್ಲಿ ಕೆಲಸಕ್ಕೆ ಸೇರುತ್ತಾನೆ. ಅಲ್ಲಿ ಹಣವನ್ನು ಸಂಪಾದಿಸಿ ಸಮಾಜ ಕಾರ್ಯ ಕೈಗೊಳ್ಳಲು ಅಣಿಯಾಗುತ್ತಾನೆ. ನಂತರ ಲೋಕಲ್ ಬೋರ್ಡಿನ್ ಚೇರ್‌ಮನ್‌ನಾಗುತ್ತಾನೆ. ನಂತರ ತನ್ನ ೫೦ನೇ ವಯಸ್ಸಿನಲ್ಲಿ ಸಣ್ಣೂರಿಗೆ ಮರಳಿ ಬಂದು ಅಲ್ಲಿ ಒಂದು ಶಾಲೆಯನ್ನು ಸ್ಥಾಪಿಸುತ್ತಾನೆ. ಅಲ್ಲಿಯೇ ಶಿಕ್ಷಕ ವೃತ್ತಿಯನ್ನು ಕೈಗೊಳ್ಳುತ್ತಾನೆ. ನಂತರ

ಅವನ ಸಮಾಜ ಕಾರ್ಯವನ್ನು ಕೈಗೊಂಡದ್ದಕ್ಕೆ ಪತ್ರಿಕೆಯವರು ಅವನನ್ನು ಪ್ರಶಂಸಿಸುತ್ತಾರೆ. ನಾರಾಯಣ ಕೊನೆಗೆ ೮೦ರ ವಯಸ್ಸಿನಲ್ಲಿ ತೀರಿಕೊಂಡಾಗ ಇಡೀ ನಾಡೇ ಅವನ ಮರಣಕ್ಕಾಗಿ ದುಃಖಿಸುತ್ತದೆ. ಒಟ್ಟು ಸಾರಾಂಶ ಇಷ್ಟು.

ಈ ವಿಶ್ವಾಮಿತ್ರ ಸೃಷ್ಟಿಯ ಕಾದಂಬರಿಯ ಕೆಲವು ಸಂದರ್ಭಗಳನ್ನು ಈ ಕೆಳಗೆ ಹೇಳಲಾಗಿದೆ.

ರೈಲಿನಲ್ಲಿ ಪ್ರವಾಸ ಮಾಡುತ್ತಿರುವ ನಾರಾಯಣನಿಗೆ ರೈಲಿನಲ್ಲಿಯ ವಿಪರೀತ ಜನಸಂದಣಿಯನ್ನು ಕಂಡು ಜಿಗುಪ್ಸೆಯಾದಂತಿದೆ. ಜಾಗ ಇಲ್ಲದೇ ಹೋದರೂ ಯಾಕೆ ಟಿಕೇಟ್ ಕೊಡುತ್ತಾರೆಂದು. ನಂತರ ಅಲ್ಲಿಯೇ ಪ್ರವಾಸ ಮಾಡುವ ಒಬ್ಬ ಮಹಾಶಯನಿಗೆ ಹಟದಿಂದ ಹೆಮ್ಮೆಯಿಂದ ಕಾಲು ಸರಿಸಿರಿ ಎಂದು ನಾರಾಯಣ ಹೇಳಿದ. ಅದಕ್ಕೆ ಸಿಟ್ಟಿಗೆದ್ದ ಮಹಾಶಯ ಮಲಗಿದವರನ್ನು ಎಬ್ಬಿಸಿ ಕಾಡೋದಕ್ಕಿಂತ ಸುಮ್ನೆ ನೀವು ಮಲಗಬಾರದೆ ಎಂದನು. ಮಲಗತೀನಿ ಅದಕ್ಕೆ ಕಾಲು ಸರಿಸರಿ ಎಂದ್ಹೇಳಿದ. ಅದಕ್ಕೆ ಮಹಾಶಯ ಮಲಗಬೇಕಾದ್ರೆ ನಿಮ್ಮ ಕಣ್ಣು ನೀವು ಮುಚ್ಚಿದರಾಯ್ತು ಮಂದಿ ಕಾಲು ಯಾಕೆ ಸರಿಸಿರಿ ಅಂತ ಅಂತ ಹೇಳಬೇಕು ಎಂದು ಗೊಣಗುತ್ತ ಕಾಲು ಮಡಿಚಿಕೊಂಡ. ಎಲ್ಲರಿಗೂ ಅಷ್ಟೇ ಜಾಗ ಇದೆ ಎಂದು ಗೊಣಗಿದ ಮಹಾಶಯ ಅದಕ್ಕೆ ನಾರಾಯಣ ಎಂತಹ ಮೂರ್ಖರು ಈ ಜನ ಎಂದು ತನ್ನ ವಾದವನ್ನು ನಿಲ್ಲಿಸುತ್ತಾನೆ. ಅಷ್ಟೇ ಅಲ್ಲದೇ ಆ ರೈಲು ಗಾಡಿಯನ್ನೇ ವಿಡಂಬನಾತ್ಮಕವಾಗಿ ಹೋಲಿಸಿ ಹೇಳಿದ್ದಾರೆ. "ಹಾದಿ ಸಾಗದಿದ್ದರೂ ಅಬ್ಬರವೆಷ್ಟು? ಮೂರ್ತಿವತ್ತಾದ ನಮ್ಮ ಸಮಾಜದಂತಿದೆ ಈ ಗಾಡಿ. ಮುಂದೆ ಪ್ರಗತಿ ಇಲ್ಲ. ಇಲ್ಲದುದಕ್ಕಾಗಿ ಅಬ್ಬರ ಬೇರೆ! ಆದರೂ ಈ ಗಾಡಿ ಕೂಡ ಸುಖ ಅಲ್ಲ ಅಂತ ಹೇಳಬಹುದೆ? ನಿನ್ನಿನ ದಿವಸ ನಾನು ಕೂತು ಬಂದ ಎತ್ತಿನಗಾಡಿಗಿಂತ ಇದು 'ಭೇ ಭೇ...' ಆ ಗಾಡಿಗೆ ಹೋಲಿಸಿದರೆ ಇದು ಪುಷ್ಪಕ ವಿಮಾನ ಅಬ್ಬ! ಶಿವನಿಗೂ ಒಂದು ಎತ್ತು-ನಂದಿ-ವಾಹನ ಇದ್ದಿತಂತೆ" (ಪುಟ ೫) ಎಂದು ನಾರಾಯಣನು ಗೊಣಗುತ್ತಾನೆ.

"ಕೆಟ್ಟದನ್ನು ನೋಡುವ ಕಲಿಯುಗದ ಕಲ್ಪವೃಕ್ಷವೇ ಈ ಟ್ರೇನು ಒಮ್ಮೆ ನೋಡಿಯೇ ತೀರೋಣ ಎಂದ. ಕಂಪಾರ್ಟಮೆಂಟನ್ನು ಕಣ್ಣಿಟ್ಟು ನಿರಿಕುಸುವಾಗ ಅದೊ ಮುಗಿಲಿಗೆ ಎತ್ತದ ಮುಖದಲ್ಲಿ ಕಹಃ... ಗಹಃ..." ತೆರೆದಿಟ್ಟ ಬಾಯಿಯಿಂದ ಹೊರಡುವ ಆಕಾಶವಾಗಿ ನಾರಾಯಣಿಗೆ ಅಸಹ್ಯವೆನಿಸಿತು. ನಿದ್ದಿ ಮಾರುವಾಗ ಗೊರಿಕೆಯನ್ನು ಗುಡುಗಿಸುವುದೆಂದರೆ ಒಮ್ಮೆಲೆ ನಗೆ ಬಂದಿತು. ಪಾಪ! ಅವನ ಹೆಂಡತಿಯ ಸ್ಥಿತಿ ಏನು ಈ ರಿಪೀಟರ್ ಅಲರಾಂ ರಾತ್ರಿಯೆಲ್ಲಾ ನಡೆದರೆ? ಎಂಬುದನ್ನು ನಾರಾಯಣ ನೋಡುವ ದೃಶ್ಯದ ಮೂಲಕ ಲೇಖಕರು ವಿಡಂಬನೆಯನ್ನು ಮಾಡಿದ್ದಾರೆ. ಹಾಗೂ ನಾರಾಯಣನು ರೈಲಿನಲ್ಲಿ ತನ್ನ ಧೋತರದ ಮೇಲೆ ಚಹವನ್ನು ತೊಳೆದುಕೊಳ್ಳಲು ಸ್ಟೇಷನಿನಲ್ಲಿ ಪರದಾಡುವ ದೃಶ್ಯವನ್ನು ಲೇಖಕರು ತುಂಬಾ ವಿಡಂನಾತ್ಮಕವಾಗಿ ಚಿತ್ರಿಸಿದ್ದಾರೆ.

ನಾರಾಯಣ ಮನೆ ಬಿಟ್ಟು ಬಂದ ಸಂದರ್ಭದಲ್ಲಿ ನಾರಾಯಣನ ತಾಯಿ ಪೇಚಾಡುತ್ತಾಳೆ. ಆಗ ಅವನ ತಂದೆ ಯಾಕೆ ಪೇಚಾಡುತ್ತೀಯಾ ಸುಮ್ಮನೆ ಕೂಡಬಾರದಾ ಅವನು ಹಾಳು ಬಾವಿಯಲ್ಲಿ ಯಾವರೂ

ಬೀಳಲಿ ಇನ್ನೊಂದು ಸಂದರ್ಭದಲ್ಲಿ ಎನ್ನುತ್ತಾರೆ. ನಾರಾಯಣ ಕಿಟಕಿಯಿಂದ ಬಿದ್ದು ಬಿಟ್ಟಿದ್ದ. ಅವನು ಬಿದ್ದುದ್ದಕ್ಕೆ ಅವನಿಗೆ ನೋವಾಗಿದೆಯೇ ಇಲ್ಲವೋ ಎಂದು ತಿಳಿಯಲು ಅವನಿಗೆ ಕೆಲವು ಕ್ಷಣ ಬೇಕಾಯಿತು. ಅವನು ಎಂತಹ ಅವಿವೇಕಿ ಎಂದು ತಿಳಿಯಲು ಒಂದು ತಾಸು ಬೇಕಾಯಿತು. ಅವನು ಗೊಣಗುತ್ತಾನೆ ನನ್ನ ನಡೆ, ನುಡಿ, ಉಡುಪನ್ನು ನೋಡಿಯಾದರೂ ನಾನೊಬ್ಬ ಮರ್ಯಾದೆವಂತ ಎಂದು ತಿಳಿಯಬಾರದೇ ಈ ಜನ ಎಂದನು ಗಾಡಿಯ ಕಿಟಕಿಯಿಂದ ಅಸ್ತವ್ಯಸ್ತವಾಗಿ ಬಿದ್ದಿದ್ದಕ್ಕೆ ಈ ಜನ ನನ್ನ ಮೇಲೆ ಸಂಶಯಪಡುವರಲ್ಲ ಎಂದನು. ನನಗೆ ಹಾಸ್ಯವಾಗಿ ಮಾತನಾಡುವರಲ್ಲ "ಹಾರೋದು ಹಾರಿದ ಹಿಂದಿನ ಬಾಜು ಆದರೂ, ಹಾರಬಾರದಾಗಿತ್ತ?" ಎಂದು ಅವನಿಗೆ ಹಾಸ್ಯವಾಗಿ ಮಾತನಾಡತೊಡಗಿದರು. ಈ ರೀತಿಯ ಹಾಸ್ಯವನ್ನು ಲೇಖಕರು ನಾರಾಯಣನ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

ನಾರಾಯಣನು ಕುಲಕರ್ಣಿಯ ಮನಗೆ ಊಟಕ್ಕೆ ಬಂದಾಗ ಅವನಿಗೆ ತುಂಬಾ ಹಸಿವೆಯಾಗಿದ್ದರೂ ಕೂಡಾ, ಕುಲಕರ್ಣಿಯ ಸ್ನಾನ ಸಂಧ್ಯಾವಂದನೆ ಆಗುವವರೆಗೆ ಹಸಿದುಕೊಂಡು ಇದ್ದು ನಂತರ ಊಟಕ್ಕೆ ಕುಳಿತಾಗ ಇನ್ನು ಹುಳಿ ಆಗಿಲ್ಲ. ಬೆಲ್ಲ ಮಾತ್ರ ಹಾಕಬೇಕು. ತರಿಸಲು ಕಳಿಸಿದ್ದೇನೆ ಎಂದು ಕುಲಕರ್ಣಿಯ ಹೆಂಡತಿ ಹೇಳಿದಾಗ ನಾರಾಯಣನಿಗೆ ಆದ ಆ ಹಸಿವೆಯ ಅನುಭವವನ್ನು ಲೇಖಕರು ಸಮರ್ಥವಾಗಿ ಚಿತ್ರಿಸಿದ್ದಾರೆ.

ನಾರಾಯಣನು ಹೋಟೇಲಿನ ನೌಕರಿಯನ್ನು ಬಿಟ್ಟ ನಾರಾಯಣನಿಗೆ ತೋಟದ ಮನೆಯಲ್ಲಿ ಇರಿಸಿದ್ದ ರಂಗಣ್ಣ ಅವನೊಬ್ಬ ಯತಿ ಎನ್ನುವ ಭ್ರಮೆಯನ್ನು ಹಳ್ಳಿಯ ಜನರಲ್ಲಿ ಹುಟ್ಟಿಸಿದ್ದನು ಹಳ್ಳಿಯ ಜನ ಯತಿಯಿಂದ ಪವಾಡ ಅಪೇಕ್ಷಿಸುತ್ತಾರೆ. ನಾರಾಯಣ ಜನರು ತಂದುಕೊಟ್ಟ ತೆಂಗಿನಕಾಯಿಯನ್ನು ತಲೆಗೆ ಘಟ್ಟಿಸಿಕೊಂಡಾಗ ಧೋ ಧೋ ಎಂದು ಮಳೆ ಸುರಿಯುತ್ತದೆ. ಈ ಒಂದು ಘಟನೆಯನ್ನು ಲೇಖಕರು ಚಿತ್ರಿಸಿದ ಬಗೆ ಗಮನಾರ್ಹವಾಗಿದೆ.

ವಿಶ್ವಾಮಿತ್ರಸೃಷ್ಟಿಯಲ್ಲಿ ಒಂದು ಪ್ರಸಂಗ ಬರುತ್ತದೆ. ವಿಶ್ವಾಮಿತ್ರನು ನಾಯಿಯ ಮಾಂಸವನ್ನು ತಂದನಂತೆ ವಿಶ್ವಾಮಿತ್ರನೆ ಗಂಡಸು ಸೃಷ್ಟಿಯನ್ನು ನಿರ್ಮಿಸಿದನು. ಕ್ರಿಮಿಕೀಟಗಳ ಸೃಷ್ಟಿ ಓಹೋ ಇದೇ ವಿಶ್ವಾಮಿತ್ರನ ಸೃಷ್ಟಿ, ಹಳ್ಳಿಗರ ಸೃಷ್ಟಿ, ಹುಳಹುಪ್ಪಡಿಗಳ ಸೃಷ್ಟಿ. ನಡೆದನು ನಡೆದನು ನಾರಾಯಣನು ಈ ವಿಶ್ವಾಮಿತ್ರನ ಸೃಷ್ಟಿಯನ್ನು ಸುಧಾರಿಸರು ವಶಿಷ್ಠನಾಗಬೇಕು ಈ ವಿಶ್ವಾಮಿತ್ರನನ್ನು ಸೋಲಿಸಬೇಕಾದರೆ ಎನ್ನಿಸಿತು. ವಸಿಷ್ಠನಾದರೆ ಕಾಮಧೇನು ಬೇಕು. ಬೇಡಿದ್ದನ್ನು ನೀಡುವ ಕಾಮಧೇನು ಯಾವುದಕ್ಕೂ ದುಡ್ಡು ಬೇಕು, ಅದೇ ಕಾಮಧೇನು ದುಡ್ಡು ಗಳಿಸುವ ಹಂಚಿಕೆ ಹಾಕಬೇಕು ಮೊದಲು ಎಲ್ಲಿಯಾದರೂ ಲಾಭದ ವ್ಯವಸಾಯ ಓಹೋ ಉಪ್ಪಿಟ್ಟಿನ ವ್ಯವಸಾಯವನ್ನೇ ಕೈಗೊಂಡರಾಯಿತು. ಓಡಿದನು ಒಂದೇ ಸವನೆ ಓಡಿದನು ನಾರಾಯಣನು ಉಪ್ಪಿಟ್ಟಿನಿಂದ ವಸಿಷ್ಠನ ಕಾಮಧೇನು ದೊರಕಿಸಿ ಈ ವಿಶ್ವಾಮಿತ್ರಸೃಷ್ಟಿ ಸೃಹ್‌ಷ್-ಉಸಿರು ಸಾಲದು ಅವನಿಗೆ ವೇಗದಿಂದ ಓಡಿದಂತೆ ಹಸಿವೆ ಹೆಚ್ಚಿತು. ಹಸಿವೆ ಹೆಚ್ಚಿದಂತೆ ಓಡುವ ವೇಗವೂ ಹೆಚ್ಚಿತು. ತಾನು ಓಡುವುದು ಯಾವುದಕ್ಕಾಗಿ ಉಪ್ಪಿಟ್ಟು, ತಿನ್ನುವುದಕ್ಕೂ ಉಪ್ಪಿಟ್ಟು ಮಾರುವುದಕ್ಕೂ ಎನ್ನುವ ವಿಷಯವನ್ನು ತುಂಬಾ ಹಾಸ್ಯಾತ್ಮಕ ರೀತಿಯಲ್ಲಿ ಕೊಟ್ಟಿದ್ದಾರೆ.

ಈ ಕಾದಂಬರಿಯಲ್ಲಿ ನಾಯಕ ಸಮಾಜವನ್ನು ಪರಿವರ್ತನೆ ಮಾಡಬೇಕೆಂಬ ಆಸೆ ಹೊಂದಿರುತ್ತಾನೆ. ಇಲ್ಲಿ ವಿಶ್ವಾಮಿತ್ರಸೃಷ್ಟಿ ಕಥೆ ಪ್ರಾರಂಭವಾಗುವುದೇ ಈ ಬಯಕೆಯಿಂದ ಥರ್ಡ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ಪ್ರವಾಸ ಮಾಡುವ ಜನರ ಅಜ್ಞಾನವನ್ನು ಕಂಡ ನಾರಾಯಣ ಅದನ್ನು ಹೋಗಲಾಡಿಸಬೇಕು ಎಂದು ಹಟ ತೊಡುತ್ತಾನೆ. ಆ ರೈಲಿನಲ್ಲಿ ಆದ ಘಟನೆಯನ್ನೆಲ್ಲಾ ನೋಡಿದ ಮೇಲೆಯೇ ಅವನಿಗೆ ಸಮಾಜ ಸುಧಾರಣೆ ಮಾಡಬೇಕೆಂಬ ಕಲ್ಪನೆ ಬರುತ್ತದೆ. ಮುಂದೆ ಆ ರೈಲಿನಲ್ಲಿ ಇರುವ ಜನರು ರೈಲ್ವೆ ಅಧಿಕಾರಿಯನ್ನು ಕಂಡು ಹುಲಿ ಬಂದಂತೆ ಆಡುತ್ತಿದ್ದರು. ಅದನ್ನು ಕಂಡ ನಾರಾಯಣ ಈ ಜನ ಹಾಗೇಕೆ ಮಾಡುತ್ತಾರೆ. ಅವರಿಗೆ ಶಿಕ್ಷಣ ಕೊಡಿಸಿದರೆ ಅವರು ಆ ರೀತಿ ಮಾಡಲಿಕ್ಕಿಲ್ಲ ಎಂಬುದು ಅವನ ನಂಬಿಕೆ ಅದಕ್ಕಾಗಿ ಒಂದು ರೀತಿಯ ಸುಧಾರಣೆ ಮಾಡಬೇಕೆಂದು ತೀರ್ಮಾನಿಸಿ ಅಪರಾಧಿಯಾಗಿ ಬಂದವರಿಗೆ ಶಿಕ್ಷೆ ಕೊಡುವ ಬದಲು ಅವರಿಗೆ ಆರು ತಿಂಗಳುಗಳ ಕಾಲ ಶಿಕ್ಷಣ ಕೊಡಿಸಿದರೆ ಅವರು ಧೈರ್ಯದಿಂದ ಮುನ್ನುಗ್ಗುತ್ತಾರೆ ಎಂಬ ಒಂದು ಭಾವನೆ ನಾರಾಯಣನ ಮನಸ್ಸಿನಲ್ಲಿ ಬೆಳೆಯತೊಡಗಿತು ಅದನ್ನು ಜಾರಿಗೆ ತರಬೇಕೆಂದು ತುಂಬಾ ಪ್ರಯತ್ನಪಡುತ್ತಾನೆ.

"ರೈಲಿನಲ್ಲಿದ್ದ ವ್ಯಕ್ತಿ ನಾರಾಯಣನು ನಿಂತಿದ್ದನ್ನು ಕಂಡು ಅವರಿಗೊಂದಟ ಜಾಗಾ ಮಾಡ್ರಿ ಅಲ್ಲಿಯ ಪಾಪ ಏಟೋತ ನಿಂತಾರೆ ಎಂದ ತತ್ವಜ್ಞಾನಿ ಅವರಿಗೇನು ಕಮ್ಮಿ ಜಾಗ ಎನ್ನುತ್ತ ಗೌಡರ ಪಕ್ಕದಲ್ಲಿ ಲುಚ್ಚಾ ಕುಳಿತೇ ಬಿಟ್ಟನಲ್ಲಿ. ನರಸು ಅವರೇನೇ ಊರ ನೋಡ್ಲಾಕ ಹೊಂಟಾಗ ಕಾಣ್ಸೈತಿ ಸಾಲಿ ಬರೆವರು ಕಾಣ್ತಾರೆ ನಿಂತ್ಕೊಳ್ಳೋ ಟಿಕೇಟ್ ತೆಗೆದ್ದಾಂಗ ಕಾಣ್ಸೈತಿ. ನಾರಾಯಣನಿಗೆ ಸಿಟ್ಟಿನ ಮೇಲೆ ಸಿಟ್ಟು ಬೇಡವೆಂದರೂ ಬರುವುದಲ್ಲ ಎಂದು ಎಂತಹ ಮೈಸೊಕ್ಕಿನವ ಯಮನ ಕೋಣದಂತೆ ಉಬ್ಬಿ ನಿಂತಿದ್ದಾನೆ ಶುದ್ಧ ಹುಂಬ ಬಂದಿಷ್ಟಾದರೂ ಬುದ್ದಿ? ದೇಹ ಬೆಳೆದಂತೆ ಬುದ್ದಿ ಅಳಿಯುವುದೆಂಬುದು ಸುಳ್ಳಲ್ಲ ನಗುವರಲ್ಲ ಮತ್ತೆ ಆಯಿತು ಕೈಲಾಗದವ ತಾನೆಂದು ತಿಳಿದಿದ್ದಾರೆ ಏನೂ ಅಡ್ಡಿ ಇಲ್ಲ. ಇಂದಿಲ್ಲ ನಾಳೆ ಹಳ್ಳಿಯಲ್ಲಿ ವ್ಯಾಯಾಮ ಶಾಲೆಯನ್ನು ಹೂಡಿ ನಾರಾಯಣನು ತಲೆ ಜಾಡಿಸಿದನು ಮೂಗಿ ಏರಿಸಿದನು. ಈ ಹಳ್ಳಿಯ ಜನರೆಂದರೆ ಮಹಾ ಹೊಲಸು ಹೊಗೆಸೊಪ್ಪು ಸೇದಲೇಬಾರದು ಎಂಬ ನಿಯಮವನ್ನು ಗೊತ್ತು ಮಾಡಲೇ ಬೇಕು ಈ ವ್ಯಾಯಾಮ ಶಾಲೆಯಲ್ಲಿ" ಈ ರೀತಿ ಶಾಲೆಯನ್ನು ತೆರೆದು ಸುಧಾರಣೆ ಮಾಡಬೇಕೆಂದು ತೀರ್ಮಾನಿಸಿದ.

ಅಷ್ಟೇ ಅಲ್ಲದೆ ಹಳ್ಳಿಗಳನ್ನು ಸುಧಾರಿಸಬೇಕು ಎಂಬ ಹಟದಿಂದ ಕಮತೂರಿನ ಹೋಟೇಲೊಂದರಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಆ ದುಡಿದ ಹಣದಿಂದಲೇ ಸಮಾಜ ಸುಧಾರಣೆಯ ಕೆಲಸ ಮಾಡಬೇಕೆಂಬುದು ನಾರಾಯಣನ ಆಸೆ ಆಗಿದೆ. ಅಲ್ಲಿ ತುಳಜಿ ಎಂಬ ಮಹಿಳೆಯ ಪರಿಚಯವಾಗುತ್ತದೆ. ಅವಳಿಗೆ ಸಹಾಯ ಮಾಡಬೇಕೆಂದು ಹೆಣಗಾಡುತ್ತಾನೆ. ಅದು ಈಡೇರದೆ ಹೋದಾಗ ಬೇರೆ ರೀತಿಯಲ್ಲಿ ಸಮಾಜ ಸುಧಾರಣೆ ಮಾಡಬೇಕೆಂದು ತೀರ್ಮಾನಿಸುತ್ತಾನೆ. ಅವನಿಗೆ ಅನ್ನಿಸುತ್ತದೆ ಇನ್ನು ಈ ಕೆಲಸದಲ್ಲಿಯೇ ಬಹಳ ದಿವಸ ತೊಡಗುವುದರಲ್ಲಿ ಅರ್ಥವಿಲ್ಲ. "ಸೇವಾವೃತ್ತಿಯ ಶಿಕ್ಷಕನೇ ಆಗಬೇಕು ಎಂಬ ವಿಚಾರವು ಅವನ

ತಲೆ ಎತ್ತಹತ್ತಿತ್ತು" ನಂತರ ಈ ಸೇವಾವೃತ್ತಿಯಿಂದ ಹಣವನ್ನು ಪಡೆಯಬಾರದು ಅದರ ಬದಲು ಎರಡು ಹೊತ್ತಿನ ಊಟವನ್ನು ಪಡೆಯಬೇಕು ಎಂದು ತೀರ್ಮಾನಿಸಿ ಮಕ್ಕಳಿಗೆ ಪಾಠ ಹೇಳಿಕೊಡಲು ಮುಂದಾಗುತ್ತಾನೆ. ಹೇಗಾದರೂ ಮಾಡಿ ಸಮಾಜ ಸೇವೆಯ ಕಾರ್ಯ ಕೈಗೊಳ್ಳುವುದು ಅವನ ಉದ್ದೇಶವಾಗಿತ್ತು.

ಆದರೆ ಈ ಸಮಾಜ ಸುಧಾರಣೆಯ ಕಾರ್ಯ ಕಮತೂರಿನಲ್ಲಿ ನಾರಾಯಣನಿಗೆ ಕನಸಿನಲ್ಲಿ ಮಾತ್ರ ಸಾಧ್ಯವಾಗಿದ್ದಿತು. "ತನ್ನ ಸತ್ಕಾರ್ಯ ಸಾಹಸಗಳೆಲ್ಲ ಕನಸಿನಲ್ಲಿಯೇ ನಡೆಯುವವಲ್ಲ ಎಂಬ ಅಸಂತೋಷ" ಆದರೆ ಮೂವತ್ತು ವರ್ಷಗಳ ನಂತರ ಸಣ್ಣೂರಿನಲ್ಲಿ ಅದು ವಾಸ್ತವದಲ್ಲಿಯೂ ಅವನಿಗೆ ಸಾಧ್ಯವಾಗುತ್ತದೆ. ಸಣ್ಣೂರಿನಲ್ಲಿ ಒಂದು ಶಾಲೆಯನ್ನು ಸ್ಥಾಪಿಸುತ್ತಾನೆ. ಆತ್ಮಸಾಕ್ಷಾತ್ಕಾರದ ಅನುಭವವನ್ನು ಅವನು ಪಡೆಯುತ್ತಾನೆ. ಈ ರೀತಿಯಾಗಿ ನಾರಾಯಣ ತನ್ನ ಕೈಗೆ ಸಾಧ್ಯವಾದ ಮಟ್ಟಿಗೆ ಸಮಾಜ ಕಾರ್ಯ ಕೈಗೊಳ್ಳುತ್ತಾನೆ.

ಕಮತೂರಿನ ಜನ ಪರಂಪರೆ ಮತ್ತು ಮೂಢನಂಬಿಕೆಯನ್ನು ಬಲವಾಗಿ ನಂಬುವವರಾಗಿರುತ್ತಾರೆ. ಅದನ್ನು ಹೋಗಲಾಡಿಸಿ ವೈಚಾರಿಕ ನಿಲುವನ್ನು ಅಳವಡಿಸಬೇಕೆಂದು ನಾರಾಯಣ ಪಣತೊಡುತ್ತಾನೆ.

ಒಂದು ಸನ್ನಿವೇಶ ನಡೆಯುತ್ತದೆ. ಬಸ್ಸಿಗಾಗಿ ಕಾಯುತ್ತ ಕುಳಿತಾಗ ಗುರುಪಾದನ ಮದುವಿ ಇದೆ ಅಂತ ಹೇಳಿದಾಗ ಅದನ್ನು ಕೇಳಿ ಇನ್ನೇನು ದಿವಸಗಾಲ ಕೆಟ್ಟ ಬಂದಾವು ಎಂದರು ಸಮೀಪದಲ್ಲಿ ಕೇಳಿಬರುತ್ತಿದ್ದ ಗುರ್-ಗುರ್ ಅಂತ ಶಬ್ದ ನಾರಾಯಣನಿಗೆ ಅಪಶಕುನವಾದಂತಾಯಿತು. ದಿವಸಗಾಲ ಕೆಟ್ಟದು ನುಡಿದನಲ್ಲ. ಈಗ ನಾವು ಹುಲಿಯ ಬಾಯಿಗೆ ತುತ್ತಾಗುತ್ತೇವೆಯೋ ಏನೋ ಎಂದು ಮಲ್ಲಣ್ಣ ಮಾವ ನುಡಿದನು ಯಾಕೆ ಬರಬಲ್ಲದು ಈ ಬಸ್ಸು ಎಂದು ಗೊಣಗುತ್ತಾನೆ. ಮತ್ತೆ ಅದೇ ಮಾತು ದಿವಸ್ಗಾಲ ಕೆಟ್ಟ ಬಂದಾಮ ಅಂತ ನಕ್ಕೂ ಬಿಟ್ಟರು. ಕುಲಕರ್ಣಿರರು ಸುಖದ ಕಾಲ ಇದ್ರ ಅವರೆಂದಿಗೂ ಬಿಡುವುದಿಲ್ಲ ಗುರುಪಾದನ ಮಧುವಿನ ಕೆಟ್ಟಾಗಾಲ ಅನ್ನೇದ್ದೇನು ನಂಬಬೇಡಾ ಎಂದು ಬೈದನು ನಾರಾಯಣ ಈ ರೀತಿಯ ಮೂಢನಂಬಿಕೆಯನ್ನು ಕಂಡು ನಾರಾಯಣನು ನಗತೊಡಗಿದನು.

ಪರಂಪರಾಗತವಾಗಿ ಬಂದ ನಾರಾಯಣನ ತಂದೆ ಶಿನಪ್ಪ ನಾಯಕ ಮಗನಿಗೆ ಕೆಲವು ಮಾತನ್ನು ಆಡುತ್ತಾನೆ. ನಿನ್ನ ಈ ತರಹದ ವರ್ತನೆ ನನಗೆ ಸರಿಕಾಣುತ್ತಿಲ್ಲ ಎಂದು ಶಿನಪ್ಪ ನಾಯಕ ಹೇಳುತ್ತಾನೆ. "ಪರಂಪರೆಯಾಗಿ ನಡೆದು ಬಂದ ಆ ಪಿತೃಧರ್ಮವನ್ನು ನಡೆಸಿ ಮಗನ ಮೈಯೊಳಗೆ ಹೆಚ್ಚಾಗಿದ್ದ ಎಲುಬುಗಳನ್ನು ಹೊರಗಳೆಯಬೇಕೆ ತಂದೆಯಂತೆಯೆ ತಾನು ನಡೆಯಬೇಕೆಂಬ ಪಿತೃಭಕ್ತಿಯಿಂದ ಪ್ರೇರಿತನಾಗಿ ಮಗನೂ ತಮಗೆ ಹಾಗೆಯೆ ಮಾಡಿದರೆ ಶುದ್ಧ ಪಶುವಿನಂತೆ ವರ್ತಿಸುತ್ತಿದ್ದಾನೆ. ಅಲ್ಲೊ ಮನುಷ್ಯನಾದ ಮಾತ್ರಕ್ಕ ಮನುಷ್ಯ ಧರ್ಮ ಬಿಡ್ಬಾರದು ಅಂಬೋದನ್ನ ಮಂದಿ ಹೇಳ್ಬೇಕ ನಿನಗೆ" ಇದು ನಮ್ಮ ಪರಂಪರೆಯಲ್ಲ ಎಂದು ಶಿನಪ್ಪ ನಾಯಕ ನಾರಾಯಣನಿಗೆ ಬುದ್ದಿ ಹೇಳುತ್ತಾನೆ.

ಕಮತೂರಿನ ಜನ ಪರಂಪರೆಯಲ್ಲದೆ ಮೂಢನಂಬಿಕೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದರು ಅದಕ್ಕಾಗಿ ಒಂದು ಸನ್ನಿವೇಶ ನಡೆದೆಹೋಗುತ್ತದೆ. ರಂಗಣ್ಣ ಎನ್ನುವವನು ನಾರಾಯಣನು ಕೆಲಸ ಬಿಟ್ಟ ಮೇಲೆ

ಅವನನ್ನು ತೋಟದ ನಿವಾಸದಲ್ಲಿ ಇರಿಸಿದ್ದರು ಅವನೊಬ್ಬ ಯತಿ ಎನ್ನುವ ಭ್ರಮೆಯಲ್ಲಿ ಆ ಹಳ್ಳಿಯ ಜನರನ್ನು ನಂಬಿಸಿದ್ದನು ಅವನು ತೆಂಗಿನಕಾಯಿಯನ್ನು ತಲೆಗೆ ಘಟ್ಟಿಸಿದರೆ ಮಳೆ ಬರುತ್ತದೆ ಎಂದು ನಂಬಿಸಿದ್ದನು. ಆದರೆ ನಾರಾಯಣನಿಗೆ ಇದನ್ನು ಕೇಳಿ ಏನು ಈ ಜನ ಮೂಢನಂಬಿಕೆಯನ್ನು ಎಷ್ಟು ನಂಬುತ್ತಾರಲ್ಲ ಇವರಿಗೆ ಪರಂಪರೆ ಮತ್ತು ಮೂಢನಂಬಿಕೆಯಲ್ಲಿ ವಿರೋಧಿ ಭಾವನೆ ಮೂಡಿಸಬೇಕೆನ್ನುವುದು ನಾರಾಯಣನ ತೀರ್ಮಾನವಾಗಿತ್ತು.

ಅಜ್ಞಾನವನ್ನು ಹೋಗಲಾಡಿಸುವುದರ ಜೊತೆಗೆ ಅವನಿಗೆ ಸಮಾಜ ಪರಿವರ್ತನೆಯನ್ನು ಹುಟ್ಟು ಹಾಕಬೇಕು ಮತ್ತು ಅವರಿಗೆ ಶಿಕ್ಷಣ ಕೊಡಬೇಕು ಎನ್ನುವುದಾಗಿದೆ ಅಷ್ಟೇ ಅಲ್ಲದೆ ಜನರನ್ನು ದೈಹಿಕವಾಗಿ ಅಲ್ಲದೆ ಮಾನಸಿಕವಾಗಿ ಸಶಕ್ತರನ್ನಾಗಿ ಮಾಡಬೇಕೆಂಬುದು ಅವನ ಹಟವಾಗಿದೆ. ಕೊನೆಗೂ ಕೂಡಾ ಈ ಎಲ್ಲ ಕಾರ್ಯದಲ್ಲಿ ಯಶಸ್ಸನ್ನು ಗಳಿಸುತ್ತಾನೆ. ಅವನು ಎಷ್ಟರ ಮಟ್ಟಿಗೆ ಯಶಸ್ಸು ಗಳಿಸಿದ್ದನೆಂದರೆ ಅವನು ೮೦ರ ವಯಸ್ಸಿನಲ್ಲಿ ತೀರಿಕೊಂಡಾಗ ಇಡೀ ನಾಡಿಗೆ ನಾಡೇ ಅವನ ಮರಣಕ್ಕೆ ದುಃಖಿಸುತ್ತದೆ. ಈ ರೀತಿಯ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ ನಾರಾಯಣ.

ಈ ರೀತಿಯ ಹಳೆಯ ನಂಬಿಕೆಗಳನ್ನು, ಆಚಾರ, ವಿಚಾರಗಳನ್ನು ಘಾಸಿಗೊಳಿಸುವ ಅತ್ಯುತ್ಸಾಹವನ್ನು ಶ್ರೀರಂಗರು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಒಟ್ಟಿನಲ್ಲಿ ಶ್ರೀರಂಗರ ವಿಶ್ವಾಮಿತ್ರಸೃಷ್ಟಿ ಅರ್ಧಭ್ರಮೆ ಅರ್ಧ ವಾಸ್ತವದ ಕಾದಂಬರಿಯಾಗಿದೆ. ಬಂಡಾಯವೆದ್ದ ತರುಣನೊಬ್ಬನ ಏಳು-ಬೀಳುಗಳ ಮೂಲಕ ಜಾತಿ, ನೌಕರಶಾಹಿ, ಗುಲಾಮಿ ಶಿಕ್ಷಣಗಳ ಮೇಲೆ ನಿಂತ ಸಮಾಜದ ಕುರೂಪವನ್ನು ಚಿತ್ರಿಸುವುದರ ಜೊತೆಗೆ ಈ ಬಂಡಾಯವನ್ನು ಈ ವ್ಯವಸ್ಥೆ ಯಾವ ರೀತಿಯಾಗಿ ನಿಭಾಯಿಸುತ್ತದೆ ಎಂಬುದನ್ನು ಈ ಕಾದಂಬರಿಯ ಮೂಲಕ ಸ್ಪಷ್ಟಪಡಿಸಿದ್ದಾರೆ. ಇವರ ಕಾದಂಬರಿಯು ಬುದ್ಧಿವಂತಿಕೆಯ ಮಗ್ಗುಲಗಳನ್ನು ತೋರಿಸುತ್ತದೆ. ಅಂತರಂಗವನ್ನು ಭೇದಿಸಿ ಅವುಗಳ ಮೂಲಸ್ವರೂಪವನ್ನು ನಿರ್ಮಿಸುವುದು ಅವರ ಗುರಿಯಾಗಿದೆ ಶ್ರೀರಂಗರ ಬುದ್ಧಿವಂತಿಕೆಯಲ್ಲಿ ತಾರ್ಕಿಕತೆಯಿದೆ ಮನುಷ್ಯನ ಸಣ್ಣತನವನ್ನು ಅನೇಕ ವಾದಗಳಿಂದ ಸಮರ್ಥಿಸಿ ತೋರಿಸುವ ಹಂಬಲ ಅವರದು ಮನುಷ್ಯನ ಜೀವನವನ್ನು ಭಿನ್ನ ಭಿನ್ನ ದೃಷ್ಟಿಕೋನಗಳಿಂದ ಭಿನ್ನ ಸನ್ನಿವೇಶಗಳಲ್ಲಿ ನೋಡುವುದು ಈ ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಸಾಧ್ಯವಾಗಿದೆ.

### ೪.೨ ಕಾದಂಬರಿಯ ಆಶಯ ಮತ್ತು ಆಕೃತಿ :

ಆಶಯ ಎಂದರೇನು ಎಂಬುದನ್ನು ಕೆಲವು ವಿದ್ವಾಂಸರು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. "ವಾಚಿಕ ಕಥನಗಳಲ್ಲಿನ ಮೂಲಾಂಶಗಳನ್ನು ಕುರಿತ ಸ್ವಾರಸ್ಯಕರವು ವಿಶ್ಲೇಷಣಾತ್ಮಕವೂ ಆದ ಅಧ್ಯಯನ ಮೊದಲಿನಿಂದಲೂ ನಡೆದುಬರುತ್ತಿದೆ. ಕಥನಗಳನ್ನು ಅವುಗಳ ವ್ಯತ್ಯಯಗಳನ್ನೇ ಗುಂಪು ಮಾಡುವ ಅಥವಾ ವರ್ಗೀಕರಿಸುವ ವಿಧಾನಕ್ಕೆ ಇದು ಅಗತ್ಯವಾಗಿ ನೆರವಾಗುವುದು ಕಥನಗಳ ರೂಪಸಾಮ್ಯ ಅಥವಾ

ವಸ್ತು ಸಾಮ್ಯ ತಿಳುವಳಿಕೆಗೆ ಇದರಿಂದಾಗುವ ಪ್ರಯೋಜನವನ್ನು ಅಲ್ಲಗೆಳೆಯಲಾಗದು ಇಷ್ಟೆಲ್ಲಾ ಅನುಕೂಲಕ್ಕೆ ಬರುವ ಈ ಮೂಲಾಂಶಗಳನ್ನೇ ಆಶಯಗಳೆಂದು ಕರೆಯಲಾಗಿದೆ. ಈ ಆಶಯ ಪರಿಕಲ್ಪನೆಯನ್ನು ಮೊದಲು ರೂಪಿಸಿದ ಕೀರ್ತಿ ಅಮೇರಿಕೆಯ ಸುಪ್ರಸಿದ್ಧ ವಿದ್ವಾಂಸರಾದ ಸ್ಟಿತ್ ಥಾಮ್ಸನ್ ಅವರಿಗೆ ಸಲ್ಲುತ್ತದೆ. ಸಾಂಪ್ರದಾಯಿಕ ಕಥನವೊಂದರ ಚಿಕ್ಕಘಟಕವನ್ನು ಆಶಯವೆಂದು ಕರೆಯಲಾಗಿದೆ" (ಡಾ.ರಾಗೌ, ೨೦೦೫, ಪುಟ ೪೨೪)

"ಆರ್ನೆಯವರ ಪ್ರಕಾರ ಪ್ರತಿಯೊಂದು ಆಶಯವೂ ನಿರ್ದಿಷ್ಟ ಕಥೆಯೊಂದರ ಭಾಗವಾಗಿದ್ದು ಅದು ಇತರ ಕಥಾವರ್ಗಗಳಲ್ಲಿ ಕಾಣಿಸಿಕೊಂಡರೂ ಅದು ಮೂಲದಲ್ಲಿ ಯಾವುದಕ್ಕೆ ಸಂಬಂಧಿಸಿದುದೋ ಅದರಿಂದ ಸ್ವೀಕರಣಗೊಂಡುದೆಂದಾಗುತ್ತದೆ. ಈ ಹೇಳಿಕೆ ಪರಿಸ್ಥಿತಿಯ ಸಂಪೂರ್ಣ ಉಲ್ಲಂಘನೆ ಎಂದು ಸ್ಟಿತ್ ಥಾಮ್ಸನ್ ಅಭಿಪ್ರಾಯಪಡುತ್ತಾರೆ" (ಡಾ.ರಾಗೌ, ೨೦೦೫, ಪುಟ ೪೨೫) ಆಶಯದಲ್ಲಿ ಎರಡು ಭಾಗವಾಗಿ ವಿಂಗಡಿಸಬಹುದು ಕಾರಣವಾಗುವ ವಸ್ತು, ಪಾತ್ರ ಅಥವಾ ಘಟನೆಗಳ ರೂಪ ಒಂದಾದರೆ ಅದು ಪರಿಣಾಮಗೊಳ್ಳುವ ಅದರ ಕಾರ್ಯ ಭಾಗ ಇನ್ನೊಂದು ಕಾದಂಬರಿಯ ಕಥಾ ಭಾಗವನ್ನು ಆಯ್ದುಕೊಂಡು ಅವು ಕೆಲಸ ಮಾಡುವ ರೀತಿಯಲ್ಲಿ ಈ ವಿಷಯವನ್ನು ವಿವರಿಸಬಹುದು" (ಡಾ.ರಾಗೌ, ೨೦೦೫, ಪುಟ ೪೨೫)

ಸ್ವತಃ ಶ್ರೀರಂಗರೇ ಹೇಳಿಕೊಂಡ ಹಾಗೆ ಪ್ರಜಾವಾಣಿಗೆ ವಿಮರ್ಶೆ ಬರೆಯತೊಡಗಿದ ಕಾಲದಲ್ಲಿ ಶ್ರೀರಂಗರು ಅನೇಕ ಕನ್ನಡ ಕಾದಂಬರಿಯನ್ನು ವಿಮರ್ಶೆ ಮಾಡತೊಡಗಿದರು ಆನಂದಕಂದರ 'ರಾಜಯೋಗಿ', ಕಡಂಗೊಡ್ಲು ಶಂಕರ ಭಟ್ಟರ 'ಧೂಮಕೇತು', ವಿ.ಕೃ.ಗೋಕಾಕರ 'ಇಜ್ಜೋಡು' ಹಾಗೂ ಜಡಭರತರ 'ಧರ್ಮಸೆರೆ'ಗಳನ್ನು ಎಂಬ ಕಾದಂಬರಿಯನ್ನು ವಿಮರ್ಶಿಸಿದರು. ಶ್ರೀರಂಗರು ಈ ಎಲ್ಲಾ ಕಾದಂಬರಿಯನ್ನು ಈ ರೀತಿಯಾಗಿ ವಿಮರ್ಶಿಸಿದ್ದಾರೆ. ಅವರು ಆನಂದಕಂದರ ರಾಜಯೋಗಿಯಲ್ಲಿ ಬರುವ ರಾಜಶೇಖರನ ಪಾತ್ರವನ್ನು ಕುರಿತು ಯಾವ ಹೆಸರಿನಿಂದ ರಾಜಶೇಖರನು ಕೊಲೆ ಮಾಡುವನೋ ಆ ಲಕ್ಷಾವಧಿ ಪ್ರಜೆಗಳ ಜೀವನ ಚಿತ್ರದ ಸುಳಿವೇ ಇಲ್ಲಿಲ್ಲ ಎಂದು ವಿಮರ್ಶಿಸಿದ್ದಾರೆ. ಕಾದಂಬರಿಯಲ್ಲಿ ಬರುವ ಶಿಥಿಲ ವರ್ಣನೆಗಳ ಔಚಿತ್ಯವನ್ನು ಪ್ರಶ್ನಿಸುತ್ತ ಕಾದಂಬರಿಯಲ್ಲಿ ವರ್ಣನೆಗಳು ಬೇಡವೆಂದಲ್ಲ ಆ ವರ್ಣನೆಯಲ್ಲಿ ಔಚಿತ್ಯವಿರಬೇಕು ಎಂದು ವಿಮರ್ಶಿಸಿದ್ದಾರೆ.

ಈ ಎಲ್ಲ ಕಾದಂಬರಿಯನ್ನು ವಿಮರ್ಶೆ ಮಾಡಿದ ಶ್ರೀರಂಗರು ನಂತರದಲ್ಲಿ ಕಾದಂಬರಿಯ ಕುರಿತು ಹೀಗೆ ಹೇಳುತ್ತಾರೆ. "ಕಾದಂಬರಿ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ ಅದಕ್ಕೆ 'ವಿಶಾಲಧೋರಣೆ' ಮತ್ತು 'ಏಕಸೂತ್ರತೆ' ಅವಶ್ಯಕವಾದವುಗಳು ಎಂದು ಗುರುತಿಸಿದವರಲ್ಲಿ ಶ್ರೀರಂಗರೇ ಮಾದರಿಗಳು" (ಜಿ.ಎಸ್.ಆಮೂರ, ಪುಟ ೩೨೫)

ಶ್ರೀರಂಗರು ಪ್ರಜಾವಾಣಿಗಾಗಿ 'ಕನ್ನಡ ಕಾದಂಬರಿ-ಸಮೀಕ್ಷೆ' ಎಂಬ 'ನಾಂದಿ ಲೇಖನ'ವನ್ನು ೧೯೬೭ರಲ್ಲಿ ಬರೆದರು ಈ ಲೇಖನದಲ್ಲಿ ಕಾದಂಬರಿಯ ಸ್ವರೂಪದ ಬಗ್ಗೆ ಅವರಿಗಿದ್ದ ಮುಖ್ಯ

ಆಶಯವನ್ನು ಜಿ.ಎಸ್.ಆಮೂರ ಅವರು ಸ್ಪಷ್ಟಪಡಿಸಿದ್ದಾರೆ. ಅಲ್ಲಿ ಅವರು ಹೇಳುವ ಹೇಳಿಕೆ ಈ ರೀತಿಯಾಗಿದೆ.

"ಕಾದಂಬರಿಯೂ ಮುಖ್ಯವಾಗಿ ಕತೆಯೆ ಎನ್ನಿಸಿದರೂ ಅದು ಕತೆಯ ಬೇರೆ ಪ್ರಕಾರವಾಗಿದೆ ಕಾದಂಬರಕಾರನಲ್ಲಿ ಕತೆಗಾರಿಕೆ ಬೇಕು ಅದರ ಜೊತೆಗೆ ವಿಶಾಲದೃಷ್ಟಿರಬೇಕು ಅಷ್ಟೇ ವಿಶಾಲ ಮತ್ತು ವಿವಿಧ ಅನುಭವ ಬೇಕು. ಮಾನವನ ಅಂತರಗದಲ್ಲಿ ಹಬ್ಬಿಕೊಂಡಿರುವ ಸಾವಿರಾರು ಲೋಕಗಳ ಚಿತ್ರ ಮೂಡಿಸಬಲ್ಲ ಯೋಗ್ಯತೆ ಕಾದಂಬರಿಕಾರನಲ್ಲಿರುವುದು ಅವಶ್ಯ ಎಂದು ಅವರು ಪ್ರತಿಪಾದಿಸಿದರು ಈ ಮಾತು ಸ್ಪಷ್ಟವಾಗಿ ಆಧುನಿಕ ಕಾದಂಬರಿಯತ್ತ ಬೊಟ್ಟು ಮಾಡಿ ತೋರಿಸುತ್ತದೆ" (ಜಿ.ಎಸ್.ಆಮೂರ, ೧೯೯೮, ಪುಟ ೩೫೩)

ಈ ಒಂದು ಅನುಭವದ ನಂತರ ಶ್ರೀರಂಗರು ತಾವು ವಿಮರ್ಶಿಸಿದ ಎಲ್ಲ ಕಾದಂಬರಿಗಿಂತ ಭಿನ್ನವಾದ ರೀತಿಯಲ್ಲಿ ಕಾದಂಬರಿ ಬರೆಯಬೇಕೆಂಬ ಆಶಯದಿಂದ ಅವರು ಕಾದಂಬರಿಯನ್ನು ಬರೆದರು. ಅವರು ಬರೆದ ಮೊದಲ ಕಾದಂಬರಿ ವಿಶ್ವಾಮಿತ್ರನ ಸೃಷ್ಟಿ. ಈ ಕಾದಂಬರಿಯನ್ನು ಬರೆಯುವಾಗ ಶ್ರೀರಂಗರಿಗೆ ಇದ್ದ ಆಶಯವನ್ನು ಅವರು ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. "ಇದೊಂದು ಕಾದಂಬರಿ ಎನ್ನುವುದಕ್ಕಿಂತ ಇದೂ ಒಂದು ಕಾದಂಬರಿ ಎಂಬ ಮಾತಿನಿಂದಲೇ ಈ ಗ್ರಂಥವನ್ನು ವಾಚಕರ ಮುಂದಿಡಬೇಕಾಗಿದೆ. ಹಾಗೆ ಹೇಳಿದುದರ ಕಾರಣವು ಇದನ್ನು ಓದಿದ ಮೇಲೆ ತಾನಾಗಿಯೇ ತಿಳಿದುಬರುವುದು ಸದ್ಯದ ಸಮಾಜವೇ ಈ ಕಾದಂಬರಿಯ ವಿಷಯ ಈ ಸಮಾಜ ಚಿತ್ರವನ್ನು ವಿಧವಿಧವಾದ ಬಣ್ಣ-ಗೆರೆಗಳಿಂದ ತೋರಿಸುವಾಗಲೂ ಅದರ ಏಕರೂಪಕತೆಯು ಒಡೆದು ಕಾಣುವುದಕ್ಕಾಗಿ ಒಂದು ಪಟವನ್ನುಪಯೋಗಿಸಿದೆ. ಆ ಪಟವೆಂದರೆ ನಾರಾಯಣನೊಬ್ಬ ಆಗಿನ ಮಾದರಿಯ ಸುಶಿಕ್ಷಿತ ಯುವಕ ಕಾಲೇಜಿನಿಂದ ಪದವಿ ಪಡೆದು ಜೀವನದಲ್ಲಿ ಕಾಲಿಟ್ಟಾಗ ನಾರಾಯಣನಿಗೆ ಸಮಾಜದ ವ್ಯವಹಾರದ ಜಗತ್ತಿನ ಜ್ಞಾನವೆಷ್ಟಿತ್ತೆಂಬುದನ್ನು ತೋರಿಸುವುದೊಂದು. ಅನುಭವವಿಲ್ಲದ ನಾರಾಯಣನ ವಿವೇಕ-ವಿಚಾರಗಳ ಸ್ವರೂಪವೆಂತಹದಿತ್ತೆಂಬುದೊಂದು. ಅನುಭವವನ್ನುಂಡು ಅದನ್ನೆರೆದುಕೊಂಡು ಅರಿತುಕೊಂಡು ಒರೆಗಲ್ಲಿಗೆ ಹಚ್ಚುವ ಶಕ್ತಿ ಅವನಲ್ಲಿ ಎಷ್ಟರ ಮಟ್ಟಿಗಿತ್ತೆಂಬುದೊಂದು ಪಡೆದ ಶಿಕ್ಷಣಕ್ಕೂ ನಡೆದ ವ್ಯವಹಾರಕ್ಕೂ ಸಂಬಂಧವಿದೆಯೇ? ಇದ್ದರೆ ಎಂತುಹುದು ಎಂಬುದೊಂದು ಪ್ರಗತಿಯ ಪಾಠವನ್ನು ಕಲಿತ ನಾರಾಯಣನಂತಹ ಸುಶಿಕ್ಷಿತನಿಗೆ ಸಮಾಜದಲ್ಲಿ ಯಾವ ತೆರೆದ ಜವಾಬ್ದಾರಿ ಇದೆ ಅದನ್ನು ನಾರಾಯಣನು ಹೇಗೆ ನಿರ್ವಹಿಸುವನು? ಎಂಬುದು ಒಂದು ಹೀಗೆ ಅನೇಕ ಆಧುನಿಕ ಸಾಮಾಜಿಕ ಸಮಸ್ಯೆ ಸಂಬಂಧಗಳು ನಾರಾಯಣನ ಕಥೆಯ ನಿಮಿತ್ತವಾಗಿ ಇಲ್ಲಿ ವಿವೇಚಿಸಲ್ಪಟ್ಟಿವೆ ಇಂತಹ ಕಾದಂಬರಿ ಸದ್ಯಕ್ಕೆ ನಮ್ಮಲಿಲ್ಲವೆಂದು ಹೇಳಿಕೊಂಡರೆ ಓದುವರಾರು ತಮ್ಮ ಮೇಲೆ ಆತ್ಮ ಪ್ರಶಂಸೆಯ ಆರೋಪವನ್ನು ಹೊರಿಸಲಿಕ್ಕಿಲ್ಲವೆಂದು ನಂಬಿದ್ದೇವೆ. ಒಳ್ಳೆಯದಿರಲಿ, ಕೆಟ್ಟದಿರಲಿ ಇಲ್ಲಿ ಒಂದು ಹೊಸ ಶೈಲಿಯನ್ನು ಹೊಸ ಮಾದರಿಯನ್ನು ಓದುಗರ ಕೈಸೇರಿಸಿದೆ" ಎಂದು ಹೇಳಿದ್ದಾರೆ ಇದೇ ಕಾದಂಬರಿಕಾರರ ಪ್ರಮುಖ ಆಶಯ ಕೂಡಾ ಆಗಿದೆ.

ಈ ಒಂದು ಆಶಯದೊಂದಿಗೆ ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯನ್ನು ಬರೆದರು. ಈ ಕಾದಂಬರಿಯಲ್ಲಿ ಪ್ರಜ್ಞಾಪ್ರವಾಹವನ್ನು ಶ್ರೀರಂಗರು ಬಳಸಿದರು ಪಾಶ್ಚಾತ್ಯರೇ ಮೊಟ್ಟಮೊದಲು ಈ ವಾದವನ್ನು ಬಳಸಿದವರು ಪಾಶ್ಚಾತ್ಯರು ಬಳಸಿದ ಈ ಒಂದು ವಾದವು ಶ್ರೀರಂಗರ ಮೇಲೆ ತುಂಬಾ ಪ್ರಭಾವಬೀರಿತು. ಜೆಮ್ಸ್‌ನ ಪ್ರಕಾರ ಪ್ರಜ್ಞಾಪ್ರವಾಹವೆಂದರೆ "ಪ್ರಜ್ಞೆ ಜಡವಾದದ್ದಲ್ಲ ಚಲನಶೀಲವಾದದ್ದು. ವರ್ತಮಾನವು ಭೂತದತ್ತ ಅಥವಾ ಭವಿಷ್ಯದತ್ತ ನಡೆದ ಮಾನಸಿಕ ಚಲನೆಯನ್ನು ಒಳಗೊಂಡೇ ಇದೆ. ಪ್ರತಿಮೆ, ಆಲೋಚನೆ, ನೆನಪು, ನಿರೀಕ್ಷೆ ಇವು ಪ್ರಜ್ಞೆಯ ಸ್ವರೂಪವನ್ನು ಅರಿಯುವಾಗ ಗುರುತಿಸುವ ಪ್ರಕ್ರಿಯೆಯಾಗಿದೆ" (ಓ.ಎಲ್.ನಾಗಭೂಷಣಸ್ವಾಮಿ, ೧೯೯೮, ಪುಟ ೩) ಈ ರೀತಿಯಾಗಿ ಪ್ರಜ್ಞಾಪ್ರವಾಹ ತಂತ್ರದ ಬಗ್ಗೆ ಜೇಮ್ಸ್ ನೀಡಿದ ಹೇಳಿಕೆಯನ್ನು ಶ್ರೀರಂಗರು ತಮ್ಮ ಕಾದಂಬರಿಯಾದ ವಿಶ್ವಾಮಿತ್ರನ ಸೃಷ್ಟಿಯಲ್ಲಿ ಬಳಸಿದ್ದಾರೆ. ಇಲ್ಲಿ ಕಥಾನಾಯಕನ ಪಾತ್ರದ ಮೂಲಕ ಶ್ರೀರಂಗರು ಕಾದಂಬರಿಯುದ್ದಕ್ಕೂ ಚಿತ್ರಿಸಿದ್ದಾರೆ. ಕಥಾನಾಯಕನ ಮಾನಸಿಕ ತುಮುಲ ಮತ್ತು ಕಾಲಗಳ ಚಲನೆಯನ್ನು ಶ್ರೀರಂಗರು ಈ ಕಾದಂಬರಿಯಲ್ಲಿ ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ.

ಈ ಒಂದು ವಿಧಾನವನ್ನು ಶ್ರೀರಂಗರು ಬಳಸಿರುವುದನ್ನು ಗಿರಡ್ಡಿಯವರು ತುಂಬಾ ಸಮರ್ಪಕವಾಗಿ ಗುರುತಿಸಿದ್ದಾರೆ. "ಪ್ರಜ್ಞೆ-ಉಪಪ್ರಜ್ಞೆಗಳ ವ್ಯಾಪಾರಗಳನ್ನು ನೆನಪುಗಳ ವಿಶ್ಲೇಷಣೆಯನ್ನು ಬಳಸಿಕೊಳ್ಳುವಲ್ಲಿ ಶ್ರೀರಂಗರ ರೀತಿ ಅತ್ಯಂತ ಸೀಮಿತವಾಗಿದೆ ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ" (ಓ.ಎಲ್.ನಾಗಭೂಷಣಸ್ವಾಮಿ, ೧೯೯೮, ಪುಟ ೧೫) ಜೇಮ್ಸ್ ಅವರು ಬಳಸಿದ ರೀತಿಯಲ್ಲಿಯೇ ಶ್ರೀರಂಗರು ಕೂಡಾ ಬಳಸಬೇಕೆಂಬ ಆಶಯದಿಂದ ಅವರು ಕಾದಂಬರಿಯಲ್ಲಿ ಪ್ರಜ್ಞಾಪ್ರವಾಹ ತಂತ್ರವನ್ನು ಬಳಸಿದ್ದಾರೆ.

ಪಾಶ್ಚಾತ್ಯ ತತ್ವಜ್ಞಾನಿಗಳ ಮೂಲಕವೇ ಕಂಡುಬಂದ ಮತ್ತೊಂದು ವಾದವೆಂದರೆ ವಾಸ್ತವವಾದ ವಾಸ್ತವವೆಂದರೆ ಕಣ್ಣಿಗೆ ಕಾಣುವ ಸತ್ಯ ಎಂದಾಗಿದೆ. ಇದನ್ನು ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ತರಬೇಕೆನ್ನುವ ಆಶಯದೊಂದಿಗೆ ಅದನ್ನು ಬಳಸಿದ್ದಾರೆ. ಇಲ್ಲಿ ಲೇಖಕರು ಕಥಾನಾಯಕನಾದ ನಾರಾಯಣನ ಮೂಲಕ ಸಮಾಜದಲ್ಲಿ ಆಗುವ ದಬ್ಬಾಳಿಕೆ, ಕ್ರೂರತನವನ್ನು ವಾಸ್ತವಕ್ಕೆ ಹತ್ತಿರವಾಗುವ ರೀತಿಯಲ್ಲಿ ಅದನ್ನು ಚಿತ್ರಿಸಿದ್ದಾರೆ. "ವಾಸ್ತವ ಪ್ರಪಂಚಕ್ಕೆ ಹತ್ತಿರವಾದ ನಿತ್ಯ ಜೀವನಕ್ಕೆ ಉಪಯೋಗವಾಗುವ ಸಾಹಿತ್ಯ ನಿರ್ಮಿಸುವುದೇ ಪಾಶ್ಚಾತ್ಯ ವಾಸ್ತವವಾದಿಗಳ ಮುಖ್ಯ ಉದ್ದೇಶವಾಗಿತ್ತು" (ಯರವಿನತೆಲಿಮಠ, ೨೦೦೦, ಪುಟ ೬೯) ಈ ಒಂದು ಪ್ರಯೋಗವನ್ನು ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ತರುವ ಆಶಯದೊಂದಿಗೆ ಅದನ್ನು ಅವರು ಕಾದಂಬರಿಯಲ್ಲಿ ಬಳಸಿದರು.

ಅದಲ್ಲದೆ ನವ್ಯದ ಪ್ರಮುಖ ವಾದವಾದ ಅಸ್ತಿತ್ವವಾದವನ್ನು ನಾವು ಗುರುತಿಸಬಹುದಾಗಿದೆ. ಪಾಶ್ಚಾತ್ಯರ Existentialism ಎಂಬ ಪದಕ್ಕೆ ಸಂವಾದಿಯಾಗಿ ಇದು ಮೂಡಿಬಂದಿದೆ. ಮನುಷ್ಯನ ಅಸ್ತಿತ್ವ ಮೊದಲು, ನಂತರ ತತ್ವ "ನಾನು ಜೀವಂತ ಇದ್ದೇನೆ" ಎಂಬುದರ ಪ್ರಜ್ಞೆ ನನ್ನ ಅಸ್ತಿತ್ವದ ಅರಿವು ನನಗೆ

ಮುಖ್ಯ ಎಂಬ ಅಂಶವನ್ನು ಶ್ರೀರಂಗರು ನಾರಾಯಣನ ಪಾತ್ರದ ಮೂಲಕ ಸ್ಪಷ್ಟಪಡಿಸಿದ್ದಾರೆ. ನನ್ನ ಅಸ್ತಿತ್ವ ನನಗೆ ಮೂಲಭೂತವಾದುದು ಒಂದು ಪರಿಸ್ಥಿತಿಗೆ ನಾನು ಸ್ವತಂತ್ರ್ಯ ವ್ಯಕ್ತಿಯಾಗಿ ತೋರಿಸುವ ಪ್ರತಿಕ್ರಿಯೆ ಅನುಭವ ಮುಖ್ಯವಾದುದು. ಈ ಅನುಭವದ ಸ್ವಪ್ರಜ್ಞೆಯೇ ವ್ಯಕ್ತಿಯ ಅನುಭವ ಎನ್ನುವುದನ್ನು ಶ್ರೀರಂಗರು ನಾರಾಯಣ ಮನೆಬಿಟ್ಟು ಬಂದು ಸಮಾಜ ಸೇವೆಯಲ್ಲಿ ತೊಡಗಿ ಸಮಾಜದ ಉದ್ಧಾರ ಮಾಡಬೇಕೆನ್ನುವಲ್ಲಿ ಈ ಅಂಶವನ್ನು ಬಳಸಿದ್ದಾರೆ. ಅಸ್ತಿತ್ವವಾದದಲ್ಲಿ ಎರಡು ಅಂಶಗಳಿವೆ ಅದರಲ್ಲಿ ಒಂದು ಅಂಶವನ್ನು ಮಾತ್ರ ಇಲ್ಲಿ ಚರ್ಚೆಗೆ ತೆಗೆದುಕೊಳ್ಳಬಹುದು.

೧. ಜೀನ್ ಪಾಲ್‌ಸಾರ್ತ್ರೆಯ "ಅಸ್ತಿತ್ವವಾದದ ಪ್ರಕಾರ ಸಾಮಾಜಿಕ ಪರಿವರ್ತನೆ ಒಂದು ಕ್ರಿಯಾತ್ಮಕ ಅಂಶವಾಗಿದ್ದು ಇದನ್ನು ನಿಶ್ಚಯ ಅಥವಾ ಕ್ರಿಯೆ ಎನ್ನಬಹುದು" (ಬರಗೂರು ರಾಮಚಂದ್ರಪ್ಪ, ೨೦೦೨, ಪುಟ ೨೬೯) ಎನ್ನುವ ಅಂಶ ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿಯಲ್ಲಿ ಸಮರ್ಥವಾಗಿ ಮೂಢಿಬಂದಿದೆ. ಈ ಒಂದು ವಾದವನ್ನು ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ಬಳಸುವುದು ಅವರ ಒಂದು ಆಶಯ ಕೂಡಾ ಆಗಿತ್ತು.

ಅಷ್ಟೇ ಅಲ್ಲದೇ ಈ ಕಾದಂಬರಿಯಲ್ಲಿ ಅಸಂಗತವಾದವನ್ನು ಕೂಡಾ ಗುರುತಿಸಬಹುದು ಅಂದರೆ ಅಸಂಗತವಾದದ ಕುರಿತ ಪ್ರತಿಕ್ರಿಯೆಯೊಂದು ಈ ರೀತಿಯಾಗಿದೆ. "ಬದುಕು ಯಾವಾಗಲೂ ಕೇವಲ ಸಂಗತವಾದುದಲ್ಲ ಬದಲಿಗೆ ಅದು ಅಸಂಗತವಾದುದು ಮಾನವನ ಬದುಕು ಹೇಗೆ ವ್ಯವಸ್ಥಿತ ರೂಪದಲ್ಲಿ ಪ್ರಕಟಿಸುವುದಿಲ್ಲವೋ ಅದೇ ರೀತಿ ಅಸಂಗತತೆ ಎಂಬುದು ಸಾಹಿತ್ಯದ ವಸ್ತು ಹಾಗೂ ತಂತ್ರಕ್ಕೆ ಕಾರಣವಾಯಿತು ಜೀವನದ ಬಗ್ಗೆ ಲೇಖಕರಿಗಿದ್ದ ಜೀವನದ ಗಾಢ, ಹಾಗೂ ನಿಗೂಢ ಅನುಭವಗಳನ್ನು ಅಭಿವ್ಯಕ್ತಿಸಲು ಈ ವಾದ ಸಹಾಯಕವಾಯಿತು. ಬದುಕಿನ ನೈರಾಶ್ಯ ಸ್ಥಿತಿಗಳನ್ನು ಅಸಂಗತವಾಗಿ ಪರಿಭಾವಿಸುವ ಸ್ಥಿತಿ ಯೂರೋಪಿನ ಬದುಕಿನಲ್ಲಿ ಸಹಜವಾಗಿಯೇ ಎದುರಾಯಿತು. ಭೀಕರ ನಗರ ಜೀವನ, ಯುದ್ಧೋತ್ತರ ಬದುಕಿನ ಬರಡುತನ ಮುಂತಾದವು ಅಸಂಗತತೆಯ ಅನುಭವಕ್ಕೆ ಕಾರಣವಾದವು. ಒಂದು ರೀತಿಯಲ್ಲಿ ಮನುಷ್ಯನಿಗೆ ಉಂಟಾಗುವ ಕೊರತೆಗಳೇ ಪರಿಣಾಮದಲ್ಲಿ ಅಸಂಗತವಾಗಿರುತ್ತದೆ" (ಬರಗೂರು ರಾಮಚಂದ್ರಪ್ಪ, ೨೦೦೨, ಪುಟ ೨೬೯) ಅಸಂಗತವಾದದ ಈ ಅನುಭವವನ್ನು ನಾವು ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯುದ್ದಕ್ಕೂ ಕಾಣಬಹುದಾಗಿದೆ.

"ಒಬ್ಬ ವ್ಯಕ್ತಿಯ ಮನಸ್ಸಿನ ಹಿಂದೆ ಸಮಗ್ರ ಜನಾಂಗದ ಪಾಪ-ಪುಣ್ಯಗಳ ಅಸ್ಪಷ್ಟ ಚಿತ್ರಶಾಲೆಯನ್ನು ತೆರೆದಿಡುವ ರೀತಿ ಆ ಪ್ರಯಾಣದಿಂದ ಶ್ರೀರಂಗರದು ಸರಳವಾದ ಮಾರ್ಗವಾಗಿದೆ. ಹಟಮಾರಿಯಾದ ವಿಚಾರವಾದಿಯೊಬ್ಬ ತಿರುತಿರುಗಿ ಅದೇ ಮಾತನ್ನೇ ಹೇಳುತ್ತ ಸತ್ಯದ ಕಡೆಗೆ ಬೊಟ್ಟುಮಾಡಿ ತೋರಿಸುವ ರೀತಿ ಅದು ಕಾದಂಬರಿಯಲ್ಲಿ ಮನೋವಿಶ್ಲೇಷಣೆಯ ತಂತ್ರ ನಮಗೆ ಪಾಶ್ಚಾತ್ಯರಿಂದಲೇ ಬಂದಿದ್ದರೂ ಶ್ರೀರಂಗರು ಅದನ್ನು ತಮ್ಮ ರೀತಿಯಲ್ಲಿ ಅಳವಡಿಸಿಕೊಂಡದ್ದು ಮಹತ್ವದ್ದಾಗಿದೆ" (ಕೀರ್ತಿನಾಥ ಕುರ್ತಕೋಟಿ, ೨೦೦೨, ಪುಟ ೨೧೦) ಕೀರ್ತಿನಾಥ ಕುರ್ತಕೋಟಿಯವರು ಅಭಿಪ್ರಾಯಪಟ್ಟಿದ್ದಾರೆ.

ಪಾಶ್ಚಾತ್ಯರ ಅಸಂಗತವಾದವನ್ನು ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ತರುವ ಆಶಯವನ್ನು ಹೊಂದಿದ್ದು ಅಲ್ಲಿ ಅವರ ಅಸಂಗತ ಪ್ರಜ್ಞೆ ಯಾವ ರೀತಿ ಕೆಲಸ ಮಾಡಿದೆ ಎನ್ನುವುದಕ್ಕೆ ಅವರ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿ ಉತ್ತಮ ಉದಾಹರಣೆಯಾಗಿದೆ.

ಒಟ್ಟಿನಲ್ಲಿ ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿ ಪಾಶ್ಚಾತ್ಯರ ಅನೇಕ ವಾದಗಳ ಸಮ್ಮಿಶ್ರಣವಾಗಿದೆ. ಆದರೆ ಕೊನೆಯಲ್ಲಿ ಅಲ್ಪಸ್ವಲ್ಪ ಬದಲಾವಣೆಯ ನಂತರ ಈ ಕಾದಂಬರಿ ಭಾರತೀಯರ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಕಾರಣ ಶ್ರೀರಂಗರಿಗೆ ನವೋದಯದ ಪ್ರಭಾವ ಬಹಳವಿದ್ದಿದ್ದರಿಂದ ಅವರು ಕಾದಂಬರಿಯ ಕೊನೆಯನ್ನು ಸುಖಾಂತರವಾಗಿಸಿದ್ದಾರೆ.

ಇವರ ಈ ರೀತಿ ಹೊಸ ಪ್ರಯೋಗದ ಕಾದಂಬರಿಯು ಸಮಾಜಕ್ಕೆ ಯಾವ ರೀತಿಯ ಸಂದೇಶವನ್ನು ಕೊಡುತ್ತದೆ ಎನ್ನುವುದನ್ನು ನೋಡಬಹುದು. ಈ ಕಾದಂಬರಿಯಲ್ಲಿ ಬರುವ ನಾರಾಯಣನ ಪಾತ್ರ ಸಮಾಜಕ್ಕೆ ತುಂಬಾ ಹತ್ತಿರದ ಪಾತ್ರವಾಗಿ ಮೂಡಿಬಂದಿದೆ. ಅಲ್ಲಿ ಅವನ ವ್ಯಕ್ತಿಪ್ರಜ್ಞೆ ಸಮಾಜಪ್ರಜ್ಞೆಯಾಗಿ ಮೂಡಿಬಂದಿದೆ ಎನ್ನುವುದನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಕಾದಂಬರಿಯಲ್ಲಿ ರೈಲ್ವೆ ಪ್ರವಾಸದಲ್ಲಿಕಂಡುಬರುವ ಜನರು ಅವರ ಅಜ್ಞಾನ ಮತ್ತು ಆ ಜನರನ್ನು ಸಮಾಜ ಯಾವ ರೀತಿ ದುಡಿಸಿಕೊಳ್ಳುತ್ತದೆ ಎನ್ನುವುದನ್ನು ನಾರಾಯಣ ನೋಡುತ್ತಾ ಆ ಪ್ರಜ್ಞೆಯ ಹಿನ್ನೆಲೆಯಲ್ಲಿಯೇ ಸಮಾಜವನ್ನು ಯಾವ ರೀತಿ ಸುಧಾರಿಸಬೇಕು ಅದರಿಂದ ಆ ಮುಗ್ಧ ಜನರನ್ನು ಯಾವ ರೀತಿ ಹೊರತರಬೇಕು ಎಂಬ ಒಂದು ಆಶಯದಿಂದ ನಾರಾಯಣನ ವ್ಯಕ್ತಿಪ್ರಜ್ಞೆ ಕೆಲಸ ಮಾಡಿದೆ. ಅಷ್ಟೇ ಅಲ್ಲದೇ ಜನರು ಮೂಢನಂಬಿಕೆಯನ್ನು ಯಾವ ರೀತಿ ನಂಬುತ್ತಾರೆ ಎನ್ನುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಇವೇ ಮೊದಲಾದ ಲೇಖಕರು ತಮ್ಮ ಕಾದಂಬರಿಯಲ್ಲಿ ನಾಲ್ಕು ಕಲ್ಪಗಳನ್ನಾಗಿ ಮಾಡಿ ಅದನ್ನು ಚಿತ್ರಿಸಿದ್ದಾರೆ. ಹಾಗೂ ಇದು ಅವರ ಕೃತಿರಚನೆಯ ಆಶಯ. ಮೊದಲನೆಯ ಕಲ್ಪವನ್ನಾಗಿ 'ಆದಿಕಲ್ಪ ಮತ್ತು ರಾಜಯೋಗ' ಎಂದು ಮಾಡಿಕೊಂಡಿದ್ದಾರೆ. ಅದರಲ್ಲಿ ವ್ಯಕ್ತಿಪ್ರಜ್ಞೆಯೊಂದು ಸಮಾಜಪ್ರಜ್ಞೆಯಾಗಿ ಪರಿವರ್ತನೆಯಾಗುವ ಪ್ರಾಥಮಿಕ ಹಂತವನ್ನಾಗಿ ಚಿತ್ರಿಸಿದ್ದಾರೆ.

ಎರಡನೆಯ ಕಲ್ಪವಾದ 'ವಿಕಲ್ಪ ಇಲ್ಲವೇ ತಪೋನಿಷ್ಠ' ಇದರಲ್ಲಿ ವ್ಯಕ್ತಿ ಪ್ರಜ್ಞೆಯ ಆಧಿಕ್ಯದಿಂದಾಗಿ ಸಮಾಜಪ್ರಜ್ಞೆ ದುರ್ಬಲವಾಗಿರುವುದನ್ನು ಕಾಣಬಹುದು.

ಮೂರನೆಯ ಕಲ್ಪವಾದ 'ಸಂಕಲ್ಪ ಮತ್ತು ಆತ್ಮಸಂಶೋಧನೆಯಲ್ಲಿ' ಸಮಾಜಪ್ರಜ್ಞೆಯ ಅಧಿಕ್ಯದಿಂದ ವ್ಯಕ್ತಿಪ್ರಜ್ಞೆ ದುರ್ಬಲವಾಗಿರುವ ಬಗೆಯಾಗಿ ಚಿತ್ರಿಸಿದ್ದಾರೆ.

ನಾಲ್ಕನೆಯ ಕಲ್ಪವಾದ 'ಸಾಕಲ್ಲಪ! ಇಲ್ಲದೇ ಸಾಕ್ಷಾತ್ಕಾರ' ಇದರಲ್ಲಿ ಸಮಾಜಪ್ರಜ್ಞೆಯ ಮೂಲಕ ವ್ಯಕ್ತಿಪ್ರಜ್ಞೆಯ ಔನ್ನತ್ಯವಾಗಿಸಿರುವುದನ್ನು ಚಿತ್ರಿಸಿದ್ದಾರೆ. ಈ ರೀತಿಯಾಗಿ ನಾಲ್ಕು ಕಲ್ಪವಾಗಿಸಿಕೊಂಡು ಅದರಲ್ಲಿ ವ್ಯಕ್ತಿಪ್ರಜ್ಞೆ ಮತ್ತು ಸಮಾಜಪ್ರಜ್ಞೆಯ ವಿವಿಧ ಹಂತವಾಗಿ ನಿರೂಪಿಸಿದ್ದಾರೆ.

ಅದಲ್ಲದೇ ವಿಶ್ವಾಮಿತ್ರಸೃಷ್ಟಿ ಕಾದಂಬರಿಯನ್ನು ಓದಿದವರಿಗೆ ಇದರಿಂದ ತಿಳಿದುಬಂದಿರುವುದು ಮಹತ್ವಪೂರ್ಣವಾಗಿದೆ. ಈಗಿನ ಯುವಕರು ತಮ್ಮ ಅರಿವು ತಮಗಿಲ್ಲದೆ ಇರುವಂತಹುರುದು ಅಂಥದ್ದರಲ್ಲಿ ಅವರು ಬೇರೆಯವರ ಮತ್ತು ಸಮಾಜದ ಸುಧಾರಣೆ ಮಾಡಲು ಹೇಗೆ ಸಾಧ್ಯ ಅಂಥವರಿಗೆ ಅನೇಕ ವಿಚಾರವನ್ನು ತಿಳಿಯಪಡಿಸುವ ಉದ್ದೇಶದಿಂದ ಈ ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಬರುವ ನಾರಾಯಣ ಎಂಬ ವ್ಯಕ್ತಿ ತನ್ನ ವಿಚಾರ ಲಹರಿಯ ಮೂಲಕ ಸಮಾಜವನ್ನು ಸುಧಾರಿಸಬೇಕೆನ್ನುವುದು ಅದನ್ನು ಅವನು ಯಾವ ರೀತಿಯಾಗಿ ಕೈಗೊಳ್ಳಬೇಕು ಯಾವ ರೀತಿ ಕೈಗೊಂಡರೆ ಸಮಾಜ ಸುಧಾರಣೆ ಆಗುತ್ತದೆ ಎಂಬುದನ್ನು ಅರಿತುಕೊಂಡು ಸುಧಾರಣೆಗೆ ಕೈಹಾಕುವುದನ್ನು ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ. ಈ ಒಂದು ಕಾದಂಬರಿಯನ್ನು ಓದಿದರೆ ಈಗಿನ ಯುವಪೀಳಿಗೆ ತಮ್ಮ ವ್ಯಕ್ತಿಪ್ರಜ್ಞೆಯನ್ನು ಯಾವ ರೀತಿ ಹೇಗೆ ಬಳಸಿಕೊಳ್ಳಬೇಕು ಎಂಬುದನ್ನು ತೋರಿಕೊಡುವ ಒಂದು ಮಹತ್ವದ ಕಾದಂಬರಿಯಾಗಿ ಮೂಡಿಬಂದಿದೆ.

ಈ ಕಾದಂಬರಿ ಗೊಂದಲಗೆಡಿಸುವ ರೀತಿಯಲ್ಲಿ ಚಿತ್ರಿತವಾಗಿದೆ ಎಂದು ಅನೇಕ ವಿಮರ್ಶಕರು ಹೇಳಿರುವುದು ಕಂಡುಬರುತ್ತದೆ. ಓತಪ್ರೋತವಾಗಿ ಹರಿದು ಬರುವ ವಿಚಾರ ಪ್ರವಾಹವನ್ನು ಅನುಸರಿಸಿ, ಅರಿತು ಸಾವಧಾನವಾಗಿ ಓದಿದರೆ ಅದರಲ್ಲಿರುವ ಹೊಸ ಆಲೋಚನ ಲಹರಿ ಕಂಡುಬರುತ್ತದೆ. ಇದರಿಂದ ಓದುಗರಿಗೆ ಹೊಸ ವಿಚಾರ ತಿಳಿಯಲು ಸಹಾಯಕವಾಗಬಹುದು.

ಈ ಕಾದಂಬರಿಯಲ್ಲಿ ಕಥನಾಯಕನಾದ ನಾರಾಯಣ ಸಮಾಜದ ಜನರೊಂದಿಗೆ ತುಂಬಾ ಆತ್ಮೀಯ ಸಂಬಂಧವನ್ನು ಹೊಂದಿದ್ದಾನೆ. ಅವರನ್ನು ಶಿಕ್ಷಿತರನ್ನಾಗಿ ಮಾಡುವ ಒಂದು ಹಟದಿಂದ ಅವರೊಂದಿಗೆ ಅನೋನ್ಯವಾದ ಸಂಬಂಧವನ್ನು ನಾರಾಯಣ ಹೊಂದುವುದರ ಮೂಲಕ ಅವರನ್ನು ಶಿಕ್ಷಿತರನ್ನಾಗಿ ಮತ್ತು ಸದೃಢರನ್ನಾಗಿ ಮಾಡುವ ಕೆಲಸವನ್ನು ನಾರಾಯಣ ಕೈಗೊಂಡಿದ್ದಾನೆ. ಈ ಕಾದಂಬರಿಯಲ್ಲಿ ಮೊದಲಿನಿಂದ ಕೊನೆಯವರೆಗೂ ನಾರಾಯಣ ಸಮಾಜದೊಂದಿಗೆಯೇ ಇದ್ದು ನಂತರ ಅವರೊಂದಿಗೆಯೇ ಅನೇಕ ಕಾರ್ಯವನ್ನು ಕೈಗೊಂಡು ಸಮಾಜ ಸುಧಾರಕನಾಗಿ ಮೆರೆಯುತ್ತಾನೆ. ಈ ವಿಶ್ವಾಮಿತ್ರನ ಸೃಷ್ಟಿ ಉತ್ತಮ ಪುರುಷ ನಿರೂಪಣೆಯು ಇರುವ ಸಾಧ್ಯತೆಗಳನ್ನು ತೋರುತ್ತಲೇ ಅದರ ಇನ್ನೊಂದು ಮಗ್ಗಲಿನೆಡೆಗೆ ಬೆರಳು ಮಾಡಿದೆ.

**೩.೩ ವಿಶ್ವಾಮಿತ್ರಸೃಷ್ಟಿಯ ಪಾತ್ರ ವೈವಿಧ್ಯ :**

ಶ್ರೀರಂಗರ "ವಿಶ್ವಾಮಿತ್ರಸೃಷ್ಟಿ' ಎಂಬ ಶೀರ್ಷಿಕೆ ಕಾದಂಬರಿಯ ಅಂತರ್ಯದಲ್ಲೂ ಅಷ್ಟೇ ಔಚಿತ್ಯಪೂರ್ಣ ವ್ಯಾಖ್ಯಾನವಾಗಿದೆ. ಬಹಿರಂಗದಲ್ಲಿ ಶೀರ್ಷಿಕೆಯಾಗಿ ಈಕೃತಿ ಪಡೆದುಕೊಂಡ ವಿಭಿನ್ನ ವೈಚಾರಿಕ ದೃಷ್ಟಿಕೋನ ಅಂತರಂಗದಲ್ಲಿಯೂ ಪ್ರತಿ ಹೆಜ್ಜೆಯಲ್ಲೂ ಅನುರಣಿಸಿದೆ. ಹೇಗೆ ವಿಶ್ವಾಮಿತ್ರ ಬ್ರಹ್ಮರ್ಷಿ ಪದವಿ ಪಡೆಯಲು ಅಡ್ಡಿ ಆತಂಕಗಳು ಎದುರಾದವೋ ಅದೇ ರೀತಿಯಲ್ಲಿ ಈ ವಿಶ್ವಾಮಿತ್ರನ

ಸೃಷ್ಟಿಯಲ್ಲಿಯೂ ಅನೇಕ ಗೊಂದಲಮಯ ಸನ್ನಿವೇಶಗಳನ್ನು ಓದುಗ ಎದುರಿಸಬೇಕಾಗುತ್ತದೆ. ಹೊಸ ಸೃಷ್ಟಿ ಮಾಡಿಯಾದರೂ ತ್ರಿಶಂಕುವಿಗೆ ಸ್ವರ್ಗ ಕಲ್ಪಿಸಿದಂತೆ ಕಡೆಗೆ ಬ್ರಹ್ಮರ್ಷಿ ಪದವಿ ಪಡೆದಂತೆ ಇಲ್ಲಿಯೂ ಕೂಡ ನಾರಾಯಣನೆಂಬ ಕಥಾನಾಯಕ ಅನೇಕ ಎಡರು-ತೊಡರುಗಳಲ್ಲಿ ವ್ಯಕ್ತಿತ್ವದ ಮಹೋನ್ನತ ಸಾಧನೆಯನ್ನು ಸಾಧಿಸಿದವನು. ವಿಶ್ವಾಮಿತ್ರ ಪಾತ್ರದಂತೆ ಈ ಪಾತ್ರ ಕೂಡಾ ಕಥಾನಾಯಕನ ವ್ಯಕ್ತಿ ವೈಶಿಷ್ಟ್ಯವನ್ನು ಪ್ರತಿಪಾದಿಸುವುದಾಗಿದೆ. ಇಂತಹ ವ್ಯಕ್ತಿ ವೈಶಿಷ್ಟ್ಯ ಅದರಲ್ಲೂ ವ್ಯಕ್ತಿಯ ಮನೋಧರ್ಮದ ನೆಲೆಯಲ್ಲಿ ವಿಶಿಷ್ಟತೆಯನ್ನು ಸಾಕಾರಗೊಳಿಸುವ ಈ ಕಾದಂಬರಿಯಲ್ಲಿ ಕಥಾನಾಯಕ (ನಾರಾಯಣ)ನೊಬ್ಬನೇ ಪಾತ್ರ. ಈ ಪಾತ್ರಕ್ಕೆ ಅಲ್ಲಲ್ಲಿ ಒದಗುವ ಸನ್ನಿವೇಶಗಳ ಮೂಲಕ ಇನ್ನುಳಿದ ಪಾತ್ರಗಳನ್ನು ಲೇಖಕರು ಕೆಲವೊಮ್ಮೆ ಸ್ವತಃ ನಿರೂಪಕರಾಗಿ ಕೆಲವೊಮ್ಮೆ ಸಂಭಾಷಣೆಗಳ ಮೂಲಕ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಪ್ರಜ್ಞೆ-ಪರಿಸರ ಎಂಬ ಎರಡೇ ಪಾತ್ರಗಳು ಇಡೀ ಕಥಾನಕವನ್ನು ನಿಯಂತ್ರಿಸಿವೆ ಎಂದರೆ ಅತಿಶಯೋಕ್ತಿಯಾಗಲಾರದು.

ಪ್ರಸ್ತುತ ಲೇಖಕರು ವ್ಯಕ್ತಿ ಪ್ರಜ್ಞೆಯನ್ನು ಕೇದ್ರವಾಗಿರಿಸಿ ಸೃಷ್ಟಿಸಿರುವ ಕಾದಂಬರಿಯಲ್ಲಿ ಈ ಪ್ರಜ್ಞೆಯನ್ನು ಪ್ರಧಾನವಾಗಿಸಿ ಇನ್ನುಳಿದ ಪಾತ್ರಗಳನ್ನು ಈ ಪ್ರಜ್ಞೆಗೆ ಅಧೀನವಾಗಿ ಚಿತ್ರಿಸಿರುವುರಾದರೂ ಯಾವುದೇ ಪಾತ್ರ ಕೇಂದ್ರ ಪ್ರಜ್ಞೆಗೆ ಯಾವುದೇ ರೀತಿಯ ಪೋಷಣೆ ಕೊಡುವುದಿಲ್ಲ ಅಂದರೆ ಕೇವಲ ಕೇಂದ್ರ ಪ್ರಜ್ಞೆಯ ಸನ್ನಿವೇಶಗಳಾಗಿ ಬಂದು ಹೋಗುವ ಈ ಪಾತ್ರಗಳು ಒಟ್ಟಾರೆ ಕಥನ ಕ್ರಿಯೆಯ ಬೆಳವಣಿಗೆಗೆ ಇಂಬು ಕೊಡುವುದಿಲ್ಲ. ಆದರೂ ಅದರಲ್ಲಿನ ಬೆರಳೆಣಿಕೆಯ ಕೆಲ ಪಾತ್ರಗಳನ್ನು ಪಾತ್ರ ವೈವಿಧ್ಯದ ಔಚಿತ್ಯದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಈ ವಿಶ್ವಾಮಿತ್ರಸೃಷ್ಟಿಯಲ್ಲಿ ಬರುವ ಪಾತ್ರಗಳು ನಾರಾಯಣ, ಹೋಟೇಲ್ ಮಾಲಿಕ, ಕುಲಕರ್ಣಿ, ರಂಗಣ್ಣ, ತುಳಜಿ, ನಾರಾಯಣನ ತಂದೆ ಮತ್ತು ಮಾವ ಈ ಎಲ್ಲಾ ಪಾತ್ರಗಳು ಯಾವ ರೀತಿಯಾಗಿ ಕಾರ್ಯ ನಿರ್ವಹಿಸಿವೆ ಎಂಬುದನ್ನು ವಿವೇಚಿಸಲಾಗಿದೆ. ತನ್ಮೂಲಕ ಕಥಾನಾಯಕನಾದ ನಾರಾಯಣನ ಪಾತ್ರಕ್ಕೆ ಯಾವ ರೀತಿಯ ಸನ್ನಿವೇಶವನ್ನು ಈ ಪಾತ್ರಗಳು ಒದಗಿಸಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಮೊದಲಿನಿಂದ ಕೊನೆಯವರೆಗೂ ಉಳಿಯುವ ಪಾತ್ರವೆಂದರೆ ನಾರಾಯಣ ಮಾತ್ರ. ಉಳಿದ ಪಾತ್ರಗಳ ಸಾಂದರ್ಭಿಕವಾಗಿ ಚರ್ಚೆ ಆಗುವುದನ್ನು ಬಿಟ್ಟರೆ ನಾರಾಯಣನ ಮನಸ್ಸಿನ ವೈಚಾರಿಕ ಮನೋಭಾವವೇ ಈ ಕಾದಂಬರಿಯ ಪ್ರಧಾನ ಹಾಗೂ ಏಕೈಕ ಪಾತ್ರ.

**ಹೋಟೇಲ್ ಮಾಲೀಕ :**

ಪ್ರಸ್ತುತ ಕಾದಂಬರಿಯಲ್ಲಿ ಹೋಟೆಲ್ ಮಾಲಿಕನೇ ನಾರಾಯಣನಿಗೆ ಮೊದಲು ಪರಿಚಯವಾಗುವ ವ್ಯಕ್ತಿ. ಕಥಾನಾಯಕನಿಗೆ ಎದುರಾಗುವ ಹಾಗೂ ಉದರಾಂಭರಣದ ಸಮಸ್ಯೆಯ ಪರಿಹಾರವಾಗಿ ಈ ಹೋಟೆಲ್ ಮಾಲಿಕನ ಪಾತ್ರ ಮೂಡಿಬಂದಿದೆ. ಈ ಪಾತ್ರ ಕಥೆಗೆ ಪೂರಕ ಪ್ರೇರಣೆಯಾಗಿ ಎಲ್ಲಿಯೂ ನಿಂತಿಲ್ಲ.

ಕಮತೂರಿಗೆ ಬಂದ ನಾರಾಯಣನು ಒಂದು ಹೋಟೆಲೊಂದರಲ್ಲಿ ಕಾಲಿಡುತ್ತಾನೆ. ಹೋಟೆಲಿನಲ್ಲಿ ಕಾಲಿಟ್ಟಾಕ್ಷಣ ಹೋಟೆಲ್ ಮಾಲೀಕ

"ಬಡವರ ಸ್ಥಿತಿಗತಿಯನ್ನು ನೋಡಿಕೊಳ್ಳಲಿಕ್ಕೆ ಬಂದವರಾ ತಾವು ಮಮಲೇದಾರರ ಕೋರ್ಟಿನಿಂದ ಬಂದವರೇನು ತಾವು ಎಂದು ಕೇಳುತ್ತಾನೆ ಮಮಲೇದಾರ್ರ-! ನಾರಾಯಣನಿಗೆ ಏನು ತೋಚದಾಯಿತು" (ಪುಟ ೧೨೨)

ಹೋಟೆಲ್ ಮಾಲಿಕ ಅವನನ್ನು ನಿಜವಾಗಿಯೂ ಮಮಲೇದಾರನೆಂದು ತಿಳಿದು ಆ ಹೋಟೆಲ್ ಮಾಲಿಕ ಅವನಿಗೆ ಉಪಚಾರವನ್ನು ಮಾಡತೊಡಗಿದನು.

"ಉಪಹಾರಗೃಹದ ಉಪೇಂದ್ರನಿಗೆ ಮುಗಳ್ನಗೆ. ತಾವು ಮಾಮಲೇದಾರ್ರ ಕೋರ್ಟಿನವರು ಅಂತ ನಾನು ಯಾರಿಗೂ ಹೇಳೋದಿಲ್ಲ ಬಿಡಿ. ಸ್ವಾಮಿ... ಏನೊ ತಮ್ಮನ್ನ ನೋಡಿದ ಕ್ಷಣ ನನಗೆ ಹಾಗೇ ತೋತು ಬಾಯಿಂದಾಡಿ ಬಿಟ್ಟೆ" (ಪುಟ ೧೨೨)

"ಉಪಹಾರ ಮುಗಿದ್ಮೇಲೆ ಗಾಡಿ ಹೇಳಿಕಳಿಸ್ಬೇಕೇನು ಹೀಗೆ ಕೇಳಿದ್ದಕ್ಕೆ ಚಕಿತನಾಗಿ ಹಿತ್ತಾಳೆ ಹಿಡಿಕೆಯ ಕಪ್ಪು ಒಡೆದನು ಕೂಡಲೆ ಅದು ಮಾಲೀಕನಿಗೆ ತಿಳಿದು ಮಾತದನು ಓಹೋ ಅಮಲ್ದಾರಿಕೆಯ ಫ್ಲೇನು ಇಷ್ಟರಲ್ಲಿ ಇಲಿಗಳು ಬೀಳಹತ್ತಿದವು ಒಳ್ಳೇದು ಇವನ ಪರೀಕ್ಷೆ ಮಾಡುವಾ ಎಂದು ದಪ್ಪದನಿಯಲ್ಲಿ ಹೇಳಿದ" (ಪುಟ ೧೨೭)

ಅವನು ಅಮಲ್ದಾರನಲ್ಲನೆಂದು ತಿಳಿದು ಬಂದಿತು ಮಾಲೀಕನಿಗೆ. ನಾರಾಯಣ ಮಾಲೀಕನಿಗೆ ಹೇಳಿದ ನಿಮ್ಮಲೇ ಕೆಲಸಕ್ಕೆ ಸೇರಿಕೋಬೇಕಂತೀನಿ ಎಂದನು ಅದಕ್ಕೆ ಮಾಲೀಕ ಕೂಡಾ ಒಪ್ಪಿದನು.

"ಹಿತ್ತಾಳೆ ಹಿಡಿಕೆಯ ಕಪ್ಪು ನೀರಿಲ್ಲಿ ಮುಳುಗಿತ್ತು ಮೇಲೆದ್ದಿತು ಮಾಲೀಕನು ಉಗುಳು ನುಂಗುತ್ತ ಗಾಡಿ ಅಂದ್ರ... ಅಂ... ಅಲ್ಲಿ ಗಾಡಿ ಹೇಳಿಕಳಿಸ್ಬೇಕೊ ಕುದುರೆ ಹೇಳ್ಬೇಕೋ ಅಂತ ಕಪ್ಪು ಮತ್ತೆ ಮೇಲೆ ನಿಂತಿತು ಹಿತ್ತಾಳೆ ಹಿಡಿಕೆಯ ಕಪ್ಪಿನಿಂದ ಹೊರಬೀಳುವ ಹೊಗೆಯಂತೆ ಮಾಲೀಕನ ಉದ್ದ ಕೂದಲುಗಳು ಹೊಯ್ದಾಡುತ್ತಲಿವೆ" (ಪುಟ ೧೨೭)

ಎಂದು ಮಾಲಿಕನು ಮಾತನಾಡುತ್ತಾನೆ. ಹೇಗಾದರೂ ಮಾಡಿ ಅವನಿಗೆ ಕೆಲಸದಿಂದ ತೆಗೆದುಹಾಕಬೇಕೆನ್ನುವುದೇ ಈ ಮಾಲೀಕನ ಯೋಚನೆಯಾಗಿದ್ದಿತು ಕೆಲಸವನ್ನು ಬಿಡಲು ತಯಾರಾದ ನಾರಾಯಣನಿಗೆ ಮಾಲಿಕ ಸಂಬಳ ಕೊಡಲು ಸತಾಯಿಸಿದ. ನೀನು ಹೆಚ್ಚು ಕಪ್ಪನ್ನು ಒಡೆದಿದ್ದೀಯ ಎಂದು ಹೇಳಿದ ಸಂಬಳ ಕೊಡು ಅಂದರೆ ಮಾಲಿಕ ಆಡುವ ಮಾತು ಈ ರೀತಿ ಇದೆ.

"ಒಳ್ಳೇ ಲೆಕ್ಕಾಚಾರ ಕಲಿತವರದು ಹಹ ಗಟ್ಟಿ ಕಿಸೆಯೊಳಗಿನ ಹಣ ತೂತು ಬಿದ್ದ ಕಿಸೆಯೊಳಗೆ ಹಾಕಿರಿ ಅಂತ ಹೇಳೋದು" (ಪುಟ ೧೩೨)

ಎಂದು ಮಾಲಿಕನು ವ್ಯಂಗ್ಯವಾಗಿ ಹೇಳಿದನು. ಇಷ್ಟು ಹೇಳಿ ಎದ್ದುಬಿಟ್ಟ ಮಾಲಿಕ. ಆ ಮಾಲಿಕ ತುಂಬಾ ಕಟುಕಿನ ಸ್ವಭಾವದವನು ನಾರಾಯಣನ ಯಾವ ಮಾತಿಗೂ ಬೆಲೆಗೊಡದೆ ಬಿತ್ತಿದ ಬಾಯಿಯಿಂದ

ಬಿಸಿಯುಸಿರನ್ನು ಬಿಡುವುದು ಕೂಡಾ ಕೇಳಿಸಲೇ ಇಲ್ಲವೇನೋ ಎಂದು ಮಾಲಿಕನು ನಡೆದನು. ನಂತರ ಅಲ್ಲಿಗೆ ಬಂದ ಮತ್ತೊಂದು ಪಾತ್ರದ ಜೊತೆ ಮಾತನಾಡುತ್ತಾ ಮಾಲಿಕ ಹೇಳಿದ

> "ಅವರಿಗೆ ಕೆಲಸ ಬಿಟ್ಟುಹೋಗು ಅಂದವರ್ಯಾರು ಅಂಥ ಕಲಿತವರು ಸುಶಿಕ್ಷಿತರು ನಮ್ಮ ಕಡೆ ಬಂದಿರೋದಂದ್ರೇನು ನಾವು ಬೇಡಾ ಅನ್ನೋದೇನು ಆದ್ರ ಅವರ ಯೋಗ್ಯತಕ್ಕೆ ತಕ್ಕ ಸಂಬಳ ನಮ್ಮಂಥಾ ಬಡವರ ಕಡೆಯಿಂದ ಕೊಡಲು ಸಾಧ್ಯವಿಲ್ಲ"
> (ಪುಟ ೧೫೪)

ಎಂದು ಮಾಲಿಕ ವ್ಯಂಗ್ಯವಾಗಿ ಮಾತನಾಡಿದನು.

ಈ ವಿಶ್ವಾಮಿತ್ರ ಸೃಷ್ಟಿ ಕಾದಂಬರಿಯಲ್ಲಿ ಬರುವ ಮಾಲಿಕನ ಪಾತ್ರ ಹಳ್ಳಿಯ ಜನರು ಅಜ್ಞಾನದ ಸ್ವರೂಪವನ್ನು ತೋರಿಸುತ್ತದೆ. ಅಧಿಕಾರಿ ಎನ್ನುವಾಗ ತೋರಿಸುವ ಆದರ ಗೌರವವನ್ನು ಅದೇ ಅವನು ಅಧಿಕಾರಿ ಅಲ್ಲ ಎಂದು ಗೊತ್ತಾದಾಗ ತೋರಿಸುವ ಕ್ರೂರತನ ಇದು ವಾಸ್ತವ ಜಗತ್ತಿನ ಯಾವ ಪರಿಕಲ್ಪನೆ ಇಲ್ಲದೆ ಇರುವ ಒಂದು ಕುಗ್ರಾಮದಲ್ಲಿ ಕೂಡ ಹೇಗೆ ಚಲಾವಣೆಯಲ್ಲಿರುತ್ತದೆ ಎಂಬ ಅಂಶದ ಪ್ರತೀಕವಾಗಿ ಪಾತ್ರ ಚಿತ್ರಣಗೊಂಡಿದೆ.

**ಕುಲಕರ್ಣಿ :**

ಕುಲಕರ್ಣಿ ಕಮತೂರಿನ ಒಂದು ಬ್ರಾಹ್ಮಣ ಮನೆತನಕ್ಕೆ ಸೇರಿದ ವ್ಯಕ್ತಿ. ಈ ಪಾತ್ರವನ್ನು ಕಾದಂಬರಿಯಲ್ಲಿ ಲೇಖಕರು ತುಂಬಾ ವಿಸ್ತಾರವಾಗಿ ತೆಗೆದುಕೊಂಡಿದ್ದಾರೆ. ಎರಡನೆಯ ಮತ್ತು ಮೂರನೆಯ ಅಧ್ಯಾಯದಲ್ಲಿ ಕುಲಕರ್ಣಿ ಹಳ್ಳಿಯ ಹಿರಿಯರಲ್ಲಿ ಒಬ್ಬನಾಗಿ ಅವನು ಆ ಹಳ್ಳಿಯ ಜನರ ಅಜ್ಞಾನವನ್ನು ಯಾವ ರೀತಿಯಾಗಿ ದುರುಪಯೋಗ ಮಾಡಿಕೊಂಡಿದ್ದಾನೆ ಎನ್ನುವುದು ಮೂಡಿಬಂದಿದೆ. ಈ ಪಾತ್ರ ಕೇವಲ ಹಳ್ಳಿಯ ವಿಶೇಷ ಪಾತ್ರವಾಗಿ ಮಾತ್ರ ಕಾಣಿಸಿಕೊಳ್ಳುತ್ತದೆಯೇ ಹೊರತು ನಾರಾಯಣನ ಒಂದು ಪಾತ್ರದ ಬೆಳವಣಿಗೆಗೆ ಈ ಕುಲಕರ್ಣಿ ಪಾತ್ರ ಯಾವ ತರಹದಲ್ಲೂ ಪೂರಕ ಪಾತ್ರವಾಗಿ ಕಂಡುಬರುವುದಿಲ್ಲ.

ಮೊಟ್ಟಮೊದಲು ಕುಲಕರ್ಣಿಯನ್ನು ನಾರಾಯಣ ನೋಡಿದ್ದೆ ರಸ್ತೆಯಲ್ಲಿ ಅವನ ಭೇಟಿ ಆದಾಗಿನಿಂದ ನಾರಾಯಣ ಏನನ್ನು ಮಾತನಾಡಿಲಿಲ್ಲ ಅದಕ್ಕೆ ಕುಲಕರ್ಣಿ ಹೇಳುತ್ತಾನೆ.

> "ಶಹರ ಊರಿನವರಿಗೆ ಬಹಳ ಕಠಿಣ ಹೋಗ್ತದ ಹಳ್ಳಿವಳಗೆ ಸಂಜೆ ಆಯ್ತೂ ಅಂದ್ರ ಊಟಾ ಮುಗಿಸಿದರೆ ದೀಪಾ ಆರಿಸಿ ಮಲಕ್ಕೊಂಡು ಬಿಡ್ತಾರೆ" (ಪುಟ ೯೨)

ಎಂದು ಹೇಳಿ ಇಂತಹ ಸುಶಿಕ್ಷಿತ ಯುವಕ ಈ ಹಳ್ಳಿಗೆ ಬಂದು ಕೆಲಸಕ್ಕೆ ಸೇರುತ್ತೇನೆ ಎಂದರೇ ಅದು ತುಂಬಾ ಹಾಸ್ಯದ ವಿಷಯ ಎಂದು ಕುಲಕರ್ಣಿ ಹೇಳಿದನು. ಈ ರೀತಿಯಾಗಿ ಕುಲಕರ್ಣಿಗೆ ನಾರಾಯಣ ಪರಿಚಯವಾದ ಮೇಲೆ ನಾರಾಯಣನು ಕುಲಕರ್ಣಿಯ ಮನೆಗೆ ಊಟಕ್ಕೆ ಬರುತ್ತಾನೆ. ಆಗ ಕುಲಕರ್ಣಿ ಆಡಿದ ಮಾತು ಈ ರೀತಿ ಇದೆ.

"ಇನ್ನೂ ಬಹಳಮಾಡಿ ಸ್ನಾನಕ್ಕೇಳಿರಿ ಊಟ ಮುಗಿಸೋಣ ನೀವು ಹಸಿದಿರುವಿರಿ ಎಂದನು. ನನ್ನ ಸ್ನಾನವಾಗಿದೆ ಎಂದಾಗ ಅದನ್ನು ಕೇಳಿ ಕುಲಕರ್ಣಿ ಮುಗಳ್ನಗೆ ನಕ್ಕನು" (ಪುಟ ೯೮)

"ದೇವರ್ರ್ನೀವಳಿಗೆ ಎಲ್ಲಾ ತಯಾರೀ ಆದನೋ ಇಲ್ಲೋ ನೋಡಿದ ಇನ್ನೇನು ಸ್ನಾನ ಮಾಡ್ತೀನಿ ಪೂಜೆ ಮುಗಿದ ಕ್ಷಣ ಊಟಕ್ಕೂತು ಬಿಡೋಣ ಎಂದು ನಾರಾಯಣನಿಗೆ ಹೇಳಿದನು. ಕುಲಕರ್ಣಿಯ ಪೂಜೆಯು ಮುಗಿಯಿತು ಊಟಕ್ಕೆ ಸಿದ್ದರಾದರು" (ಪುಟ ೯೯)

"ಊಟಕ್ಕೇಳೋಣ ಇನ್ನು ಎಂದನು ಕುಲಕರ್ಣಿ ನಾರಾಯಣ ಆಗಬಹುದು ಎಂದನು ಎಲೆ ಬಿಡಿಸ್ರಿ ಇನ್ನು ಕುಲಕರ್ಣಿಯು ಒಳಗೆ ಎದುರು ನೋಡುತ್ತ ಹೇಳಿದನು. ಅಶ್ವಮೇಧದ ಕುದುರೆಯಂತೆ ಆ ಮಾತು ದಶದಿಕ್ಕುಗಳಲ್ಲಿ ವೈಭವದಿಂದ ಮೆರೆದು ಎಲ್ಲರ ಸದ್ದು ಅಡಗಿಸಿ ವಿಜಯಶಾಲಿಯಾಗಿ ಮರಳಿ ಕುಲಕರ್ಣಿಗೆ ಬಂದು ಮುಟ್ಟಿತು. ಎಲೆ ಬಿಡಿಸ್ರಿ ಇನ್ನು ಅಂತ ಹೇಳ್ದೆ ಕೇಳಿಸ್ತೊ ಇಲ್ಲೋ? ಥಾಲೆ ಜಾರಿತು ತಂಬಿಗೆ ಉರುಳಿತು ತಟ್ಟೆ ನಡುಗಿತು ಕುಲಕರ್ಣಿ ಕೂಗಿನಿಂದ" (ಪುಟ ೧೦೨)

ಈ ರೀತಿಯ ಒಂದು ಅಸಹ್ಯವಾದ ವರ್ತನೆ ಬೇರೆಯವರಿಗೆ ಭಯತರಿಸುವ ರೀತಿಯಲ್ಲಿ ಲೇಖಕರು ಚಿತ್ರಿಸಿದ್ದಾರೆ. ಈ ಒಂದು ಸನ್ನಿವೇಶವನ್ನು ಕಂಡ ನಾರಾಯಣನಿಗೆ ಅವನು ಕಾಲಿಟ್ಟಿದ್ದು ನರಕದಲ್ಲಿ ಎಂದು ಅನ್ನಿಸತೊಡಗಿತು.

ಕುಲಕರ್ಣಿಯು ನಾರಾಯಣನ ತಂದೆಯನ್ನು ಕಮತೂರಿಗೆ ಕರೆಯಿಸಿದಾಗ ಅಲ್ಲಿ ನಡೆದ ಸಂಭಾಷಣೆ ಈ ರೀತಿಯಾಗಿದೆ.

"ನೀವು ೫-೬ ದಿವಸ್ಗಳ್ಹಿಂದೇ ಬರಬೇಕಾಗಿತ್ತು ಹಂನಾನೂ ಅದೇ ತಿಳಿದದ್ದೆ ಯಾಕಂದ್ರ ಮೊದಲಿನ ಪತ್ರದಾಗ ಬರೆದಿತ್ತು ನಾಳೆ ನಾವು ಹೊರಡ್ತೀವಿ ಅಂತ ನನಗೆ ಅನಿಸಿತ್ತು ತಾವು ಗಡಿಬಿಡಿಯಲ್ಲಿ ಆ ರೀತಿ ಬರೆದಿರಬಹುದೆಂದು ಛೇ ಛೇ ನಾನು ಸುಮ್ಸುಮ್ನೆ ತ್ರಾಸ ಕೊಟ್ಟ್ಹಂಗ ಆಯಿತಲ್ಲ ಎಂದು ಕನಿಕರದಿಂದ ಕುಲಕರ್ಣಿ ಹೇಳಿದನು. ನಾರಾಯಣ ಮತ್ತು ಅಲ್ಲಿಗೆ ಬಂದ ಎಲ್ಲರ ಜೊತೆ ಮಾತುಕತೆ ನಡೆದ ಮೇಲ ಕುಲಕರ್ಣಿ ಸಿಟ್ಟಿಗೆದ್ದು ಛೇ ಛೇ ನಿಮ್ಮಂಥಾ ಕಲಿತವ್ರು ಆಡೋ ಮಾತಲ್ಲ ಎಂದು ಬೈದನು" (ಪುಟ ೧೬೫)

ಕುಲಕರ್ಣಿ ತುಂಬಾ ಸಿಟ್ಟಿನ ವ್ಯಕ್ತಿ ಹಳ್ಳಿಯ ಪಂಚರಲ್ಲಿ ಇವನು ಒಬ್ಬನು. ಯಾವುದೇ ಜಗಳದ ವಿಷಯದಲ್ಲಿ ಕುಲಕರ್ಣಿದೇ ಕೊನೆಯ ನಿರ್ಣಯ ಅವನ ಮಾತೆ ವೇದವಾಕ್ಯ ಆ ಹಳ್ಳಿಯಲ್ಲಿ ಕುಲಕರ್ಣಿಯು ಹಳ್ಳಿಯ ಹೆಣ್ಣು ಮಕ್ಕಳ ಜೊತೆ ನಡೆಸುವ ಅನೈತಿಕ ಸಂಬಂಧವನ್ನು ತಿಳಿದ ನಾರಾಯಣನನ್ನು ಅವನು ಯಾವ ರೀತಿಯಲ್ಲಿ ನಡೆಸಿಕೊಳ್ಳುತ್ತಾನೆ ಎನ್ನುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಹಳ್ಳಿಯ ಜನರ ಅಜ್ಞಾನವನ್ನು ಯಾವ ರೀತಿಯಾಗಿ ದುರುಪಯೋಗ ಮಾಡಿಕೊಂಡರು ಎನ್ನುವುದನ್ನು ಲೇಖಕರು ಈ ಪಾತ್ರದಿಂದ ಗೊತ್ತುಪಡಿಸಿದ್ದಾರೆ. ಒಳ್ಳೆಯದನ್ನು ಮಾಡಬೇಕೆಂದು ಹೇಳುತ್ತಾ ಜನರಿಗೆ ಮೋಸ ಮಾಡುವ ಒಂದು ದುಷ್ಟ ಪಾತ್ರವಾಗಿ ಕಂಡುಬಂದಿದೆ. ಅವನ ಈ ನಯವಂಚಕ ಬುದ್ಧಿಯೇ ಈ ರೀತಿಯ ಮೋಸ ಮಾಡುವುದಕ್ಕೆ ಕಾರಣವಾಗಿದೆ ಎಂದು ಲೇಖಕರು ಹೇಳಿದ್ದಾರೆ.

**ರಂಗಣ್ಣ :**

ಕಮತೂರಿನ ಒಬ್ಬ ಶ್ರೇಷ್ಠ ವ್ಯಕ್ತಿಯಲ್ಲಿ ರಂಗಣ್ಣನು ಒಬ್ಬ. ಇವನು ಕೂಡಾ ಶಿನಪ್ಪನಾಯಕನ ಗೆಳೆಯ. ಈ ಪಾತ್ರವು ಕೂಡಾ ಕಾದಂಬರಿಯಲ್ಲಿ ವಿಸ್ತಾರಪಡೆದಿದೆ. ಈ ಪಾತ್ರ ಕುಲಕರ್ಣಿಯ ಪಾತ್ರದ ಜೊತೆಜೊತೆಯಲ್ಲಿಯೇ ಕಾದಂಬರಿಯುದ್ದಕ್ಕೂ ಬಂದಿದೆ. ಕುಲಕರ್ಣಿ ಹಾಕಿದ ಆಜ್ಞೆಯನ್ನು ಚಾಚೂ ತಪ್ಪದೇ ಪಾಲಿಸುವ ಪಾತ್ರವಾಗಿ ಕಾದಂಬರಿಯಲ್ಲಿ ಕಂಡುಬಂದಿದೆ. ಈ ಪಾತ್ರ ಕೂಡಾ ನಾರಾಯಣನಿಗೆ ಯಾವ ತರಹದಲ್ಲೂ ಪೂರಕ ಪಾತ್ರವಾಗಿ ಕಂಡುಬರುವುದಿಲ್ಲ.

ನಾರಾಯಣನಿಗೆ ರಂಗಣ್ಣನ ಪಾತ್ರ ಮೊದಲು ಕಾಣುವುದೇ ಕುಲಕರ್ಣಿಯ ಮನೆಯಲ್ಲಿ ಅದು ಶಿನಪ್ಪನಾಯಕನ ಕಮತೂರಿನ ಕುಲಕರ್ಣಿಯ ಮನೆಗೆ ಬಂದಾಗ ಅಲ್ಲಿ ರಂಗಣ್ಣನು ಕೂಡಾ ಹಾಜರಿದ್ದನು. ಅಲ್ಲಿನಾರಾಯಣನನ್ನು ಉದ್ದೇಶಿಸಿ ರಂಗಣ್ಣ ಮಾತನಾಡುತ್ತಾನೆ.

> "ಅಳಿಯಂದಿರ ಬುದ್ಧಿಮತ್ತಾ ನೋಡಿಯೇ ಅಲ್ಲಿ ನಮ್ಮ ರಾಯ್ರು ಮಗಳನ್ನು
> ಕೊಟ್ಟಿದ್ದಾರೆ" (ಪುಟ ೧೬)

ಎಂದಾಗ ನಾರಾಯಣನಿಗೆ ಸಿಟ್ಟು ತಡೆಯದಾಯಿತು. ಈ ಮಾತನ್ನು ಕೇಳಿದ ಅವನ ಮಾವನಿಗೂ ಮತ್ತು ಕುಲಕರ್ಣಿಗೂ ಸಿಟ್ಟು ತಡೆಯದಾಗಿ ರಂಗಣ್ಣನನ್ನು ಬೈಯತೊಡಗುತ್ತಾರೆ. ಕುಲಕರ್ಣಿ ಬೈದದ್ದಕ್ಕೆ ರಂಗಣ್ಣ ಸುಮ್ಮನಾಗುತ್ತಾನೆ. ರಂಗಣ್ಣನು ಕುಲಕರ್ಣಿಗೆ ಎಲ್ಲ ರೀತಿಯ ಸಹಾಯವನ್ನು ಮಾಡುತ್ತಿದ್ದನು. ಅದು ಯಾವ ರೀತಿಯಲ್ಲಿ ಎಂದರೆ ಈ ಕೆಳಗೆ ನೋಡಬಹುದು.

> "ಅದೇ ಹಳ್ಳಿಯಲ್ಲಿ ಬರುವ ಮತ್ತೊಂದು ಪಾತ್ರ ತುಳಜಿ ಅಲ್ಲಿ ಅವಳ ತಾಯಿ
> ಕುಲಕರ್ಣಿಯ ಜೊತೆ ಅನೈತಿಕ ಸಂಬಂಧ ಹೊಂದಿದ ಹಂಗಸನ್ನು ಕೊಲೆಯ
> ವಿಚಾರಣೆಯಲ್ಲಿ ಗುಟ್ಟು ಹೊರಬೀಳದಂತೆ ವ್ಯವಸ್ಥೆ ಮಾಡಿಸಿದ್ದನು" (ಪುಟ ೧೬೧)

ಈ ರೀತಿಯಾಗಿ ಕುಲಕರ್ಣಿಗೆ ಸಹಾಯ ಮಾಡುವುದರಲ್ಲಿ ರಂಗಣ್ಣ ಪ್ರಮುಖ ವ್ಯಕ್ತಿಯಾಗಿ ಕಾಣುತ್ತಾನೆ. ನಾರಾಯಣ ಹೆಂಡತಿಯನ್ನು ಬಿಟ್ಟು ಓಡಿ ಬಂದ ವಿಷಯ ತಿಳಿದ ನಂತರ ರಂಗಣ್ಣ ಅವನಿಗೆ ಬುದ್ಧಿವಾದ ಹೇಳತೊಡಗುತ್ತಾನೆ. ಅಲ್ಲಿ ತನ್ನ ಸಂಸಾರದ ಕಥೆಯನ್ನು ಹೇಳುತ್ತಾನೆ.

"ರಂಗಣ್ಣ ತನ್ನ ಸಂಸಾರ ಹೂಡಿದ ಒಂದೆರಡು ವರ್ಷದಲ್ಲಿಯೇ ಒಂದು ಅನಾಹುತ ನಡೆಯಿತು ಹುಟ್ಟಿದಾಕ್ಷಣ ಕೂಸು ಸತ್ತು ಹೋಗುತ್ತಿತ್ತು ೩ ವರ್ಷಗಳ ಕೊನೆಗೆ ೩ ಕೂಸುಗಳು ಹುಟ್ಟಿ ಸತ್ತು ಹೋದವು ಮಕ್ಕಳೆ ಹುಟ್ಟುತ್ತಿದ್ದಿಲ್ಲವೆಂದರೆ ಆ ಮಾತು ಬೇರೆ ಹೆಂಡತಿಯನ್ನು ಬಿಟ್ಟುಬಿಡಬಹುದಾಗಿತ್ತು ಆದರೆ ಮಕ್ಕಳು ಹುಟ್ಟಿ ಸಾಯುತ್ತಿವೆ ಇದಕ್ಕೆ ಹೆಂಡತಿಯನ್ನು ದೂಶಿಸುವ ಹಾಗಿಲ್ಲ ಎಂದು ರಂಗಣ್ಣ ಹೇಳಿದ" (ಪುಟ ೨೦೩)

ಈ ಒಂದು ಕಥೆ ಹೇಳಲು ಕಾರಣ ಇಷ್ಟೆಲ್ಲಾ ಆದರೂ ಕೂಡಾ ನಾನು ಹೆಂಡತಿಯನ್ನು ಬಿಟ್ಟಿಲ್ಲ ಆದರೆ ಏನು ಆಗದೇ ಹೋದರು ಕೂಡಾ ನೀನು ಈ ರೀತಿಯಾಗಿ ಹೆಂಡತಿಯನ್ನು ಬಿಡುವುದ ತಪ್ಪು ಎಂದು ನಾರಾಯಣನನ್ನು ಉದ್ದೇಶಿಸಿ ರಂಗಣ್ಣ ಮಾತನ್ನು ಮುಗಿಸಿದನು.

ನಂತರ ಕೆಲವು ದಿನಗಳ ನಂತರ ನಾರಾಯಣನಿಗೆ ಸಹಾಯ ಮಾಡುವ ಪಾತ್ರವಾಗಿ ರಂಗಣ್ಣನ ಪಾತ್ರ ಕಂಡುಬರುತ್ತದೆ. ಆ ಸಹಾಯವನ್ನು ಕೂಡಾ ಏನೋ ಒಂದು ಉದ್ದೇಶ ಇಟ್ಟುಕೊಂಡೇ ಮಾಡಿದ್ದಾನೆ. ಆ ಉದ್ದೇಶ ಕೂಡಾ ಕುಲಕರ್ಣಿಗೆ ಸಹಾಯ ಮಾಡುವುದೇ ಆಗಿತ್ತು.

ಈ ರೀತಿಯಾಗಿ ರಂಗಣ್ಣನ ಪಾತ್ರವನ್ನು ಉಪಕಾರಿ ಮನೋಭಾವದ ಪ್ರವೃತ್ತಿಯಾಗಿ ಗುರುತಿಸಿದರು. ಅದರ ಹಿಂದೆ ಯಾವುದಾದರೊಂದು ಉದ್ದೇಶ ಇದ್ದೇ ಇರುತ್ತದೆ ಎನ್ನುವುದನ್ನು ಲೇಖಕರು ತಮ್ಮ ಕಾದಂಬರಿಯಲ್ಲಿ ವ್ಯಕ್ತಪಡಿಸಿದ್ದಾರೆ.

**ತುಳಜಿ :**

ಈ ಪಾತ್ರ ಮೂರನೆಯ ಅಧ್ಯಾಯದಲ್ಲಿ ಒಂದು ಚಿಕ್ಕ ಪಾತ್ರವಾಗಿ ಮೂಡಿಬಂದಿದೆ. ಕಾದಂಬರಿಯಲ್ಲಿ ಈ ಒಂದು ಪಾತ್ರದ ಮೂಲಕ ಮಹಿಳಾ ಸ್ಥಿತಿಗತಿ ಶೋಷಣೆಯನ್ನು ಮಹಿಳೆ ತಡೆಯಲು ಸಾಧ್ಯ ಎನ್ನುವುದನ್ನು ಹೇಳಿದ್ದಾರೆ. ಶೋಷಣೆಗೆ ಒಳಗಾದ ಮಹಿಳಾ ಸಂವೇದನೆಯನ್ನು ಲೇಖಕರು ಈ ಕಾದಂಬರಿಯಲ್ಲಿ ತುಳಜಿಯ ಪಾತ್ರದ ಮೂಲಕ ತಿಳಿಸಿದ್ದಾರೆ. ಇವಳು ಕಮತೂರಿನ ಕುಲಕರ್ಣಿಗೆ ಅನೈತಿಕ ಸಂಬಂಧದಿಂದ ಹುಟ್ಟಿದ ಮಗಳಾಗಿದ್ದಾಳೆ. ಕಮತೂರಿಗೆ ಮೊದಲು ನಾರಾಯಣ ಬಂದಾಗ ಅವನು ಹೋಟೆಲೊಂದರಲ್ಲಿ ಕೆಲಸಕ್ಕೆ ಸೇರಿದ್ದನ್ನು ಅದೇ ಹೋಟೆಲಿನಲ್ಲಿ ತುಳಜಿಯು ಕೂಡ ಕೆಲಸಕ್ಕೆ ಇದ್ದಳು. ಅಲ್ಲಿಯೇ ಅವಳು ನಾರಾಯಣನಿಗೆ ಪರಿಚಯವಾದ ಮಹಿಳೆ. ಅವಳ ಜೀವನ ಕಥೆ ತುಂಬಾ ಚಿಂತಾಕ್ರಾಂತವಾಗಿತ್ತು. ಅವಳು ತಂದೆಯಿಂದ ಯಾವ ರೀತಿಯ ಸಹಾಯವನ್ನು ಬಯಸುತ್ತಿರಲಿಲ್ಲ. ತುಳಜಿ ತುಂಬಾ ಧೈರ್ಯದ ಸ್ವಭಾವದ ಮಹಿಳೆ. ಅವಳನ್ನು ಕಂಡರೆ ಕಮತೂರಿನ ಜನ ಹೆದರುತ್ತಿದ್ದರು. ನಾರಾಯಣ ತುಳಜಿಯ ಜೊತೆ ಸಲುಗೆಯಿಂದ ಇದ್ದಿದ್ದಕ್ಕೆ ತುಳಜಿ ಆಡಿದ ಮಾತು.

"ಮೈಮ್ಯಾಗಿನ ಎಚ್ಚರ ತಪ್ಪಿದರ ಬರತದ ಪರಸಂಗ ಬಾಯಿಮ್ಯಾಗ ಸಿಕ್ಕ ಸಿಕ್ಕವ್ರಿಗೆ ಸಿಕ್ಹಾಂಗ ಮಾತಾಡಿದರ ಎಂದು ರತಿದೇವಿಯ ಹುಟ್ಟನಂತೆ ಮುಗುಮುರಿದು ನುಡಿದಳು ತುಳಜಿ" (ಪುಟ ೧೩೬)

ಹೋಟೇಲ್ ಮಾಲೀಕ ನಾರಾಯಣನಿಗೆ ಸಂಬಳ ಕೊಡದೇ ಸತಾಯಿಸುವಾಗ

> "ಆ ಸಮಯಕ್ಕೆ ಸರಿಯಾಗಿ ಬಂದಿದ್ದಳು ತುಳಜಿ. ಆ ಸಮಯಕ್ಕೆ ಸರಿಯಾಗಿ ತಿರುಗಿ ತಡೆದು ನಿಂತಿದ್ದನು ಮಾಲಿಕನು. ತುಳಜಿಯ ಮುಖದಲ್ಲಿ ಗಾಂಭೀರ್ಯ ಒಂದು ಬದಿಯಲ್ಲಿ ಚಕಿತನಾದ ಮಾಲಿಕ ಒಂದು ಬದಿ ಹೆದರಿದ ನಾರಾಯಣ ಇವರಿಬ್ಬರ ಸ್ವಭಾವಗಳನ್ನು ತೂಗುವ ತಕ್ಕಡಿಯ ಕಾಣೆಯೇನೋ ಎಂಬಂತೆ ತುಳಜಿಯ ತಲೆಯು ನಾರಾಯಣನ ಕಡೆಗೊಮ್ಮೆ ಮಾಲಿಕನ ಕಡೆಗೊಮ್ಮೆ ಹೊಯ್ದಾಡುತ್ತಲಿದೆ. ತುಳಜಿಯ ಮುಖದಲ್ಲಿ ಕೋಪ. ಮಾಲಿಕನಿಗೆ ಕೋಪವಡಗಿ ಭಯ ಹುಟ್ಟಿತು ನಾರಾಯಣನಿಗೆ ಭಯ ಹೋಗಿ ಧೈರ್ಯ ಬಂದಿತು ನಾರಾಯಣನ ಧೈರ್ಯ ನೋಡಿ ತುಳಜಿಯ ತುಟಿ ಬಿರಿದುದು ತುಳಜಿಯ ತುಟಿ ಬಿರಿದಂತೆ ಮಾಲಿಕನ ಕಾಲು ನಡುಗಿದವು ಮಾಲಿಕನ ಕಾಲು ನಡುಗಿದಂತೆ ನಾರಾಯಣನ ಕಣ್ಣು ಅರಳಿದವು. ಕೂಡಲೆ ತುಳಜಿ ತಲೆ ತೂಗಿದಳು ಮಾಲಿಕನು ಬಾಯ್ಬಿಟ್ಟನು ನಾರಾಯಣನು ಎದೆ ಸೆಟೆಸಿದನು. ತುಳಜಿಯ ತಲೆ ಸ್ಥಿರವಾಗಿ ನಿಂತಿತು. ಮಾಲಿಕನನ್ನು ನೋಡುತ್ತ ಮಾಲಿಕನ ತುಟಿ ಅಲ್ಲಾಡಿದವು ತಕ್ಕಡಿಯ ಕಾಣೆಯು ಸ್ತಿಮಿತವಾಗಿ ನಿಂತಿತು. ತೂಗಿ ನೋಡುವುದು ಮುಗಿಯಿತು ಭಾರದ ಕಲ್ಲುಗಳನ್ನು ಒಂದೊಂದಾಗಿ ತಕ್ಕಡಿಯಲ್ಲಿ ತೆಗೆದಿಡುವಂತೆ ಮಾತನಾಡಿದಳು ತುಳಜಿ" (ಪುಟ ೧೫೪)

ನಂತರ ಮಾಲಿಕ ನಾರಾಯಣನಿಗೆ ಸಂಬಳ ಕೊಡಲು ಒಪ್ಪುತ್ತಾನೆ. ಆದರೆ ತುಳಜಿ ಮಾತ್ರ ಕುಲಕರ್ಣಿಗೆ ಹೆದರುತ್ತಿದ್ದಳು. ಕುಲಕರ್ಣಿಯನ್ನು ನೋಡಲು ಬಂದ ನಾರಾಯಣನಿಗೆ ತುಳಜಿ ಈ ರೀತಿ ಹೇಳುತ್ತಾಳೆ.

> "ಇಷ್ಟೊತ್ತಿನಾಗ ಅವರಿಗೆ ಕೆಲಸ ಬಾಳ ಇರ್‍ತೈತಿರಿ ಭೆಟ್ಟಿ ಆಗ್ತಾರೊ ಇಲ್ಲೊ ಎಂದಳು ತುಳಜಿ" (ಪುಟ ೧೪೧)

ಕಾದಂಬರಿಯಲ್ಲಿನ ಬಂಡಾಯದ ಧೋರಣೆಯನ್ನು ತಳೆದಿದ್ದ ತುಳಜಿಯ ಪಾತ್ರ ನಾರಾಯಣನಲ್ಲಿ ಸಮಾಜಿಕ ಪ್ರಜ್ಞೆಯನ್ನು ಉಲ್ಬಣಗೊಳ್ಳುವಂತೆ ಮಾಡಿದೆ. ಅಷ್ಟೇ ಅಲ್ಲದೆ ನಾರಾಯಣನಿಗೆ ಅವನ ಹಕ್ಕುನ್ನು ಅವನಿಗೆ ದೊರಕಿಸಿಕೊಡುವ ಮತ್ತು ಶೋಷಣೆಗೆ ಒಳಗಾದರೂ ಕೂಡಾ ಶೋಷಣೆಗೆ ಒಳಗಾಗುವವರನ್ನು ರಕ್ಷಿಸುವ ಪಾತ್ರವಾಗಿ ಲೇಖಕರು ಮೂಡಿಸಿದ್ದಾರೆ.

ಅಷ್ಟೇ ಅಲ್ಲದೆ ಲೇಖಕರ ಕುರಿತಾದ ಹಳ್ಳಿಯ ಹೆಣ್ಣುಮಕ್ಕಳ ಮಹಿಳಾ ಸಂವೇದನೆಯನ್ನು ಈ ಕೆಳಗಿನ ಸಂದರ್ಭದಲ್ಲಿ ಅರಿಯಬಹುದು. ಹೆಣ್ಣಿನ ಮನೋಧರ್ಮವನ್ನು ಹೇಳುವಲ್ಲಿ ಲೇಖಕರು ಸ್ತ್ರೀ ಸಂವೇದನೆಯನ್ನು ಮತ್ತು ಸ್ತ್ರೀ ಶಿಕ್ಷಣವನ್ನು ನಾವು ಗಮನಿಸಬಹುದು.

> ಹಳ್ಳಿಯ ಚೆನ್ನೆಯರ ತೊಡಕು ಮತ್ತು ತಲೆ ಎತ್ತಿ ತನ್ನ ಕಣ್ಣು ಕಟ್ಟಿದಂತಾಗಲು ವಿಚಾರ ತಡೆದ ಟಿಕೇಟ್-ಟಿಕೇಟ್ ನಡೆದಿದೆ. ಕರುಣೆ ಇಲ್ಲದೆ ನಡೆದಿದೆ. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ. ನಾರಾಯಣನು ತಲೆ ಎತ್ತಿದಾಗ ಯಮದೂತನು ಅಲ್ಲಿ ಕುಳಿದ

ಆ ೪-೬ ಹಳ್ಳಿಯ ಚೆನ್ನೆಯರು ಎದುರು ನಿಂತಿದ್ದ ಟಕೇಟ್ ಟಕೇಟ್ ಅಯ್ಯಾ! ಒಂದಿಟ್ ತಡೀಬಾರದ? ...ಈ ಬ್ಯಾಳಿಗಂಟಿನ ಒಂದ ಚುಂಗಿನಾಗ ಕಟ್ಟಿದ್ವಾಂಗೈತಿ... ನೋಡೋದಿಟ್.. ಬಂಗಾರಮ್ಮಾ.. ಎ ಬಂಗಾರೀ.. ಆ ಬ್ಯಾಳೀ.. ಟಕೇಟ್ ತಿ ... ಅಯ್ಯಾ! ಕುದುರೀ ಸವಾರಿ ಹತ್ತಿದ್ವಾಂಗ ಕಾಣ್ತೈತಿ.. ಈ ಕೂಸಿನಾದರೂ ಹಿಡೀಯೆ ಏ ಕಾಳಮ್ಮ! ಹೊರಗೇನ್ನೋಡ್ತೀ ಕಳ್ಳೊಂಡ ಗಂಡನ್ನ ಹುಡುಕೋರ ಹಾಂಗ.. ಕೇಳಿಸ್ತೇನ ಸೆಟವೀ ಎಂದು ಬಲವಾದ ಒಂದು ಏಟು ಕೊಟ್ಟು ಎಲ್ಲರಿಗೂ ಕೇಳಿಸುವಂತೆ ಒದರಿದಳು ತಾಯಿ ಎಲ್ಲರಿಗೂ ಕೇಳಿಸುವಂತೆಯೆ ಬೇದಳು ಮಗಳು ನಾರಾಯಣನಿಗೆ ಒಂದು ಕಡೆ ಅಸಹ್ಯ ಒಂದು ಕಡೆ ಆನಂದ ಆ ಹೆಂಗಸಿನ ನಡೆ-ನುಡಿಗಳಿಗಾಗಿ ಅಸಹ್ಯ ಆದರೂ ಆ ಅಧಿಕಾರವನ್ನು ಸೀಸನ ಬುಡದ ಗೊಂಬೆಯಂತೆ ನಡುಗಿಸುತ್ತ ನಿಲ್ಲಿಸಿದಳಲ್ಲ.



ಅಲ್ಲದೇ ಇನ್ನೊಂದು ಸಂದರ್ಭದಲ್ಲಿ ಹೆಣ್ಣು ಮಕ್ಕಳ ಪರವಾದ ಧ್ವನಿಯನ್ನು ನಾವಿಲ್ಲಿ ಕಾಣಬಹುದಾಗಿದೆ.

"ಕಹ.. ಗಹ.. ಮುಗಿಲಿಗೆ ಎತ್ತಿದ ಮುಖದಲ್ಲಿ ತೆರೆದಿಟ್ಟ ಬಾಯಿಯಿಂದ ಹೊರಡುವ ಆಕಾಶವಾಣಿ ನಾರಾಯಣನಿಗೆ ಅಸಹ್ಯವೆನ್ನಿಸಿತು ನಿದ್ದೆ ಮಾಡುವಾಗ ಗುರಿಕೆಯನ್ನು ಗುಡುಗಿಸುವುದೆಂದರೆ ಒಮ್ಮೆಲೆ ನಗೆ ಬಂದಿತು ಪಾಪ ಅವನ ಹೆಂಡತಿಯ ಸ್ಥಿತಿಯೇನು ಈ ರಿಪೀಟರ್ ಅಲಾರ್ಮ್ ರಾತ್ರಿಯೆಲ್ಲಾ ನಡೆದರೆ ನಮ್ಮ ಸಮಾಜದ ಹೆಂಗಸರೇ ಇದನ್ನು ಸಹಿಸುವ ಪೆಚ್ಚುಗಳು! ಯೂರೋಪದಲ್ಲಿದ್ದರೆ ಇವನಿಂದ ಇಲ್ಲವೆ divorce ಬೇಡಬಹುದಾಗಿತ್ತು ಇವನ ಹೆಂಡತಿ ನಿಜವಾಗಿ ನೋಡಿದರೆ ಗುರಿಕೆಯಿಂದ ನಿದ್ದೆಗೇಡಾಗಿ ತನ್ನ ಪ್ರಕೃತಿ ಕೆಟ್ಟಿತೂ ಅಂತ damages ಕೂಡಾ ಬೇಡಬಹುದು ಹೆಂಗಸು.. ಯಾಕೆ ಬೇಡಬಾರದು? ಹಾಗೆ ನೋಡಿದರೆ ತನಗೆ ಬೇಡವೆನಿಸಿದ ಗಂಡನನ್ನು ಬಿಟ್ಟುಬಿಡುವ ಅಧಿಕಾರ ಹೆಂಗಸಿಗೆ ಬೇಕೆಬೇಕು" (ಪುಟ ೪)



ಈ ಮಾತು ಲೇಖಕರ ಯೂರೋಪ ಪ್ರವಾಸದಿಂದ ಪಡೆದ ಅನುಭವವನ್ನು ಹಾಗೆ ಆ ಕಾಲಕ್ಕೆ ಅವರು ಪ್ರತಿಪಾದಿಸಿದ ಸ್ತ್ರೀ ಶಿಕ್ಷಣ ಹಾಗೂ ಸ್ತ್ರೀ ಸ್ವಾತಂತ್ರ್ಯವನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

**ಶಿನಪ್ಪನಾಯಕ ಮತ್ತು ಕೃಷ್ಣಪ್ಪ :**

ಈ ಎರಡು ಪಾತ್ರಗಳು ನಾರಾಯಣನಿಗೆ ತುಂಬಾ ಹತ್ತಿರದ ಪಾತ್ರಗಳಾಗಿವೆ. ಶಿನಪ್ಪನಾಯಕನ ಪಾತ್ರದ ಧೋರಣೆಯೇ ಮುಂದೆ ನಾಯಕನ ಸ್ವಭಾವ-ಧೋರಣೆಯಾಗಿ ನಿರೂಪಿತವಾಗಿದೆ. ಲೇಖಕರೇ ಮೊದಲಿಗೆ ತಿಳಿಸುವಂತೆ ಈ ಪಾತ್ರದ ಗುಣಸ್ವಭಾವ ತುಂಬಾ ಹಟವಾದಿತನ ಸಾಧಿಸುವ ಛಲಗಾರಿ ಸಂಸ್ಕಾರ ಎನ್ನುವಲ್ಲಿಯೂ ಹೊಸ ಬಗೆಯ ಆಲೋಚನಾಕ್ರಮವುಳ್ಳದ್ದಾಗಿದೆ.

"ಶಿನಪ್ಪನಾಯಕನ ಹಟ ಎಂದರೆ ಹಟ ಹಳ್ಳದ ಹೊಲ ತನ್ನದೂ ಅಂತ ಸಾಧಿಸೋದಕೆ ಮಿಕ್ಕ ಹೊಲಗಳನ್ನೆಲ್ಲ ಮಾರಿದ ಮಗ ಆತ ಎಂದು ಅಡಿಕೆ ಹೋಳನ್ನು ಕೆಳಗೆ-ಮೇಲೆ ಅತ್ತಿತ್ತ

ನೋಡದೆಯೇ ಅರ್ಜುನನ ಬಾಣದ ಗುರಿಯಂತೆ ನೀಟಾಗಿ ಬಾಯಿಯೊಳಗೆ ಒಗೆದು ಮಾತನಾಡಿದ ಒಬ್ಬ" (ಪುಟ ೩)

ಈ ಮಾತಿನಿಂದ ಹಳ್ಳಿಗರ ಚಾಕಚಕ್ಯತೆಯನ್ನು ಶಿನಪ್ಪನ ಹಠವಾದಿತನವನ್ನು ಗ್ರಹಿಸಬಹುದಾಗಿದೆ. ಮಗನು ಮದುವೆಯ ಮನೆ ಬಿಟ್ಟು ಓಡಿ ಹೋದಾಗ ಶಿನಪ್ಪನಾಯಕನು ತುಂಬಾ ಕೆರಳಿದ್ದನು. ಆಗ ಮಗನನ್ನು ಹುಡುಕಿಸಿ ಎಂದು ಅವನ ತಾಯಿ ಹೇಳಿದಾಗ

"ಮಗಳ ಕಾಳಜಿ ಇದ್ದವರು ಹುಡುಕಿಸಿಕೊಳ್ಳಲಿ ಅಳಿಯನ್ನ ಎಂದು ನಿಷ್ಠೂರವಾಗಿ ಮಾತನಾಡಿದನು ಅವನನ್ನು ಹುಡುಕಿಸಲು ಅವನೇನು ಸಣ್ಣ ಕೂಸೇನು ತಂದೆಯ ಧರ್ಮ ಕಲಿಸಿದೆ ಮದುವೆ ಮಾಡಿದೆ ಮುಂದಿನ ಹಣೆಬರಹ ಅವನದು" (ಪುಟ ೪೫)

ಎಂದು ಶಿನಪ್ಪನಾಯಕರು ನಿಷ್ಠೂರವಾಗಿ ನುಡಿದರು. ನಾರಾಯಣನು ಮದುವೆಯ ಮನೆಬಿಟ್ಟು ಓಡಿ ಕಮತೂರಿನಲ್ಲಿದುದ್ದು ಕುಲಕರ್ಣಿಯಿಂದ ಗೊತ್ತಾಯಿತು. ಅದು ಹೇಗೆಂದರೆ ಕುಲಕರ್ಣಿ ಮತ್ತು ಶಿನಪ್ಪನಾಯಕನಿಗೆ ಬರೆದ ಪತ್ರದಿಂದ ತಿಳಿಯಿತು ಆಗ ಅವರು ಅಲ್ಲಿಗೆ ಬಂದಾಗ ಆದಂತಹ ಮಾತುಕತೆ ಈ ಕೆಳಗಿನಂತಿದೆ. ಅವರು ಹೇಳಿದ ಸಮಯಕ್ಕೆ ಬರದೇ ಯಾಕೆ ತಡ ಮಾಡಿದಿರಿ ಎಂದಾಗ

"ಕೃಷ್ಣಾಚಾರಿಗೆ ಚಿತ್ರಹುತಿಯನ್ನಿಡುವಾಗ ಅನ್ನದಲ್ಲಿ ಕೂದಲೆಳೆ ಹೊರಟಂತಾಯಿತು ಮೈಲಿಗೆ ಆಯಿತೆನ್ನಬೇಕೆ ಹಸಿದ ಕಾಲಕ್ಕೆ ಊಟವನ್ನು ಬಿಟ್ಟುಕೊಟ್ಟು ಏಳಬೇಕು ಮೈಲಿಗೆ ಆಗಿಲ್ಲವೆನ್ನಬೇಕೆ ಕೂದಲೆಳೆ ಉದ್ದವಾಗಿ ಎದ್ದುದು ಬದಿಯವರಿಗೆ ಕಾಣಿಸಿದೆ. ಅಂತಹ ಪೀಚಿನಲ್ಲಿ ಸಿಕ್ಕಿಕೊಂಡನು ಬ್ರಾಹ್ಮಣನು ಅನುಕೂಲ ಆಗಲಿಲ್ಲ ಮನೆಯಲ್ಲಿ ಕೆಲಸ ಇದಲ್ಲದೆ ಹೊರಗೆ ಪ್ರಾಪ್ತಿಯ ಆಮಂತ್ರಣ ಇದನ್ನು ಬಿಟ್ಟು ಹೋಗುವುದು ಹೇಗೆ ಎಂದು ಹಟ ಹಿಡಿದಿದ್ದನು ಕೃಷ್ಣಾಚಾರಿ ಕಡೆಗೆ ಹೋಗಿ ಬರುವ ವೆಚ್ಚವಲ್ಲದೆ ಮೇಲೆ ಹದಿನೈದೋ ಇಪ್ಪತ್ತೋ ಕೊಡಬೇಕು ಎಂದನು ನಾರಾಯಣನಿಗೆ" (ಪುಟ ೧೬೫)

ಮೂಹುರ್ತವನ್ನು ನೋಡಿಕೊಂಡು ಹೋಗೋಣ ಒಂದೆರಡು ದಿವಸ ತಡ ಆದರೂ ಅಡ್ಡಿ ಇಲ್ಲ ಅಂತ ಶಿನಪ್ಪನಾಯಕರೇ ಹೇಳಿದರು. ನಂತರ

"ಕೃಷ್ಣಾಚಾರಿಯು ನಾರಾಯಣನ ಹತ್ತಿರ ಬಂದು ಕುಳಿತು ಬೆನ್ನ ಮೇಲೆ ಕಯ್ಯನಿಟ್ಟನು ಕಿವಿಗೆ ಬಾಯಿ ಹೆಚ್ಚಿದನು ಬೆಕ್ಕು ಹಾಲು ಕುಡಿಯುವ ರೀತಿಯಲ್ಲಿ ಎತ್ತರವಾದ ಕಳ್ಳದನಿಯಿಂದ ರಹಸ್ಯದ ಮಾತನ್ನು ಹೇಳಿದನು ನನ್ನ ಮಾತು ಕೇಳ್ರೊಳ್ರಿರಿ ನಾರಾಯಣರಾಯ್ರು ನಾಯಕರು ಸಿಟ್ಟಿಗೆ ಬಂದಾರ ಅಲ್ಲ ತಂದೆಯ ಸಿಟ್ಟು ಅಂದರ ಎಂಥಾದು ಬೆಣ್ಣೆ ಕಾಯ್ದ ಹಾಂಗ ಕೊನೆಗೆ ತುಪ್ಪ ಆಗೋದೆ ಮುಪ್ಪಿನೊಳಗೆ ಮಕ್ಕಳು ಸಂರಕ್ಷಣ ಮಾಡ್ಬೇಕು ಅನ್ನೋದೊಂದು ಕರುಳಿನ ಹಂಬಲ ಮನುಷ್ಯಗ ಇರತದ ಎಂದನು" (ಪುಟ ೧೭೯)

ಅಷ್ಟರಲ್ಲಿ ಶಿನಪ್ಪನಾಯಕರು ಮಾತನ್ನು ಮುಂದುವರೆಸುತ್ತಾರೆ. ಇವರಿಂದ ಸಂರಕ್ಷಣ ಯಾರಿಗೆ ಬೇಕು ಸಾಯೋತನಕ ನಂ ನಮಗ ಸಾಕಾಗುವಷ್ಟು ಕೊಟ್ಟಾನ ಶ್ರೀಹರಿ ಎಂದು ಅಡಿಕೆಯ ಹೋಳನ್ನು ಬಾಯಲ್ಲಿ ಹಾಕಿಕೊಂಡು

> "ಶ್ರೀಹರಿ ಅವರಿಗೆ ಸಾಕಾಗುವಷ್ಟು ಕೊಟ್ಟಿದ್ದನು ತನ್ನ ಮನೆಯ ಆಸ್ತಿಯನ್ನೇನು ಕೊಡುವುದಿಲ್ಲ ಶ್ರೀಹರಿ ಎಂದ ಮೇಲೆ ಹಿಂದೆ ಮುಂದೆ ನೋಡುವನು ಯಾಕೆ? ಆಪ್ತರನ್ನು ಕೊಟ್ಟಿದ್ದ ಸಣ್ಣೂರಿನ ಜನವಸತಿಯನ್ನು ಕೊಟ್ಟಿದ್ದ ಆಪ್ತರ ಕೂಡ ಕಲಿದಾಡುವ ಕಲಿತನ ಕೊಟ್ಟಿದ್ದ ಬಡವರೊಡನೆ ಬುದ್ದಿಯ ವ್ಯವಹಾರವನ್ನು ಮಾಡುವ ಬುದ್ಧಿಮತ್ತೆಯನ್ನು ಕೊಟ್ಟಿದ್ದ ಇನ್ನು ಹೆಚ್ಚಿಗೇನು ಕೊಡಬೇಕು ಅದಕ್ಕಾಗಿ ನಾಯಕ ಯಾವಾಗಲೂ ಹೇಳುತ್ತಿದ್ದರು ಸಾಯೋತನಕ ನಂ ನಮಗ ಸಾಕಾಗುವಷ್ಟು ಕೊಟ್ಟಾನ ಶ್ರೀಹರಿ ಇವರು ತಂಸಂರಕ್ಷಣೆ ತಾವ್ಮಾಡಿಕೊಂಡ್ರ ಸಾಕಾಗೆದ" (ಪುಟ ೧೭೯)

ಈ ರೀತಿ ಬೇಸರದ ದನಿಯಲ್ಲಿ ನುಡಿದನು. ಶಿನಪ್ಪನಾಯಕರಿಗೆ ಸಿಟ್ಟು ಹೆಚ್ಚಾಯಿತು ನೀನು ಚಹಾದಂಗಡಿಯಲ್ಲಿ ಕೆಲಸಾ ಮಾಡಬೇಡಾ ಎಂದು ಸಿಟ್ಟಿನಿಂದ ನಾಯಕರು ಹೇಳಿದರು ನಿನ್ನ ಮಗನು ಬೇಕಾದರೆ ತೆಗೆದುಕೊಳ್ಳಲು ನನ್ನ ಮೇಲೆ ಬೇಡ ಇಂತಹ ಆಟ ಎನ್ನುವಂತೆ ಆ ಅಡಿಕೆ ಡಬ್ಬದ ಮುಚ್ಚಳದ ಮೇಲಿನ ಹಿಡಿಯ ಬಲವಾಗಿ ಏಟನ್ನು ತಾಕಿಸಿತು. ನಾಯಕನಿಗೆ

> "ನಾನು ಬೇಕಾದ್ದೇಳ್ತಿನಿ ನಿನಗೆ ತಿಳಿಯುವುದಿಲ್ಲವೇನೊ ಎಂದು ನಾಯಕರು ನುಡಿದರು ಬ್ರಾಹ್ಮಣನಾಗಿ ಹುಟ್ಟಿದ್ದಕ್ಕೆ ಅಭಿಮಾನ ಆದ್ರು ಅದನೊ, ಇಲ್ಲೋ ಎಂದು ಹುಂಕರಿಸಿದನು ನಾಯಕ" (ಪುಟ ೧೭೧)

ಮಗನು ಕೂಡಾ ಸುಮ್ಮನಿರದೆ ನನಗೆಲ್ಲಿದ ನೌಕರಿ ಸಿಗಬೇಕು ಆಗ ನಾಯಕರು ನಿನಗ್ಯಾರು ಹೇಳಿದರು ನೌಕರಿ ಸಿಗೋಲ್ಲ ಅಂತ ನಿನ್ನ ಮನಸ್ಸಿನೊಳಗೆ ಇದ್ದರ ಎಲ್ಲಿ ಬೇಕಾದಲ್ಲಿ ಹಚ್ಚಿಸಿಕೊಡ್ತೀನಿ ನಿನಗೆ ಬ್ಯಾಡಾಗೇದ ಸಂಭಾವಿತತನದಿಂದ ಇರೋದು ಎಂದು ನಾಯಕರ ಮಗನ ಮೇಲೆ ಹಕ್ಕು ಚಲಾಯಿಸುತ್ತಾರೆ. ಮಗನ ಅಸಭ್ಯವಾದ ವರ್ತನೆಯಿಂದ ಏನು ಹಾಗೆ ಹುಚ್ಚನ್ಹಾಂಗ ಮಾತಾಡಿದರ ಎಂದು ನಾಯಕರು ನುಡಿದರು ನಾಯಕರಿಗೆ ಸಿಟ್ಟು ತಡೆಯದಾಗಿ ನಮ್ಮ ಮನೆತನದ ಮಾನಹೋಯ್ತು ಹೋಗಲೊಲ್ಲದೇಕೆ ಆದರೆ ಸಂಬಂಧ ಹೂಡಿದ ಮರ್ಯಾದಸ್ಥರ ಮಾನಾನೂ ಕಳಿಯಲಿಕ್ಕೆ ನಿಂತಿದ್ದಾನೆ ಎಂದು ನಾಯಕರು ನುಡಿದರು.

> "ಶಿನಪ್ಪನಾಯಕನಿಗೆ ಮಗನ ವರ್ತನೆ ತಿಳಿಯದಾಯಿತು ಇದೇನು ಭ್ರಮೆ ಬಡೆದ ಬುದ್ದಿಯ ಲಕ್ಷಣವೊ ವಿಪರೀತ ಬುದ್ಧಿಯ ಲಕ್ಷಣವೊ ಎಂದು ಅವರ ಬುದ್ಧಿತೊಡಕು ತಾವು ಹೀಗೆ ವರ್ತಿಸಿದ್ದರ ತಮ್ಮ ತಂದೆಯವರು ಏನು ಮಾಡುವುತ್ತಿದ್ದರೆಂಬುದರಲ್ಲಿ ಅವರಿಗೆ ಸಂಶಯ ಹುಟ್ಟಿತು" (ಪುಟ ೧೭೪)

ಎಷ್ಟು ಹೇಳಿದರೂ ತಂದೆಯ ಗದರಿಕೆಗೆ ಹೆದರುವ ಸ್ಥಿತಿಯಲ್ಲಿರಲಿಲ್ಲ ನಾರಾಯಣ. ಈ ರೀತಿಯಾಗಿ ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಲೇಖಕರು ತಂದೆಯು ಮಗನ ಮೇಲೆ ಹೊಂದಿದ ಪ್ರೀತಿ ಮತ್ತು ಮಮಕಾರವನ್ನು ಎತ್ತಿ ತೋರಿಸಿದ್ದಾರೆ.

**ನಾರಾಯಣ :**

ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರ ನಾರಾಯಣ. ಶಿನಪ್ಪನಾಯಕನ ಒಬ್ಬನೇ ಒಬ್ಬ ಮಗ ಈ ನಾರಾಯಣ. ಈ ಪಾತ್ರದ ವಿಭಿನ್ನ ಹಾಗೂ ವಿಶಿಷ್ಟ ದೃಷ್ಟಿಕೋನದ ಹಿನ್ನಲೆಯಲ್ಲಿ ನಾಲ್ಕು ಅಂಶಗಳನ್ನು ಗುರುತಿಸಲಾಗಿದೆ. ಹಾಗೂ ಈ ನಾಲ್ಕು ಅಂಶಗಳು ಇಡೀ ನಾರಾಯಣ ಪಾತ್ರ ಸೃಷ್ಟಿಗೆ ಕಾರಣವಾಗುವ ಬಗೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

೧. ವ್ಯಕ್ತಿಪ್ರಜ್ಞೆ ಮತ್ತು ಸಮಾಜಪ್ರಜ್ಞೆ

೨. ಬಂಡಾಯ ಮತ್ತು ಪರಂಪರೆ

೩. ಅಜ್ಞಾನ ಮತ್ತು ಶಿಕ್ಷಣ

೪. ವಾಸ್ತವಿಕತೆ ಮತ್ತು ಭ್ರಮಾಲೋಕ

ನಾರಾಯಣನು ಮದುವೆಯ ಮನೆಬಿಟ್ಟು ಬಂದು ರೈಲಿನಲ್ಲಿ ಪ್ರವಾಸ ಮಾಡುತ್ತಿರುವ ಸಂದರ್ಭದಲ್ಲಿ ಅವನ ವ್ಯಕ್ತಿಪ್ರಜ್ಞೆ ಚುರುಕಾಗುತ್ತದೆ. ಅಲ್ಲಿ ಇರುವ ಜನರ ರೀತಿ ನೀತಿಯನ್ನು ಗಮನಿಸಿದಾಗ ಅದು ಇನ್ನು ಬಲಗೊಳ್ಳುತ್ತದೆ.

> "ಅಲ್ಲಿಗೆ ಬಂದ ನರಳುವ ಮುದುಕನನ್ನು ಕಂಡು ಇಂಥವರಿಗೆಲ್ಲ ಯಾಕಾದರೂ ಈ ಥರ್ಡ್‌ಕ್ಲಾಸ್. ಕಂಪಾರ್ಟ್‌ಮೆಂಟಿನಲ್ಲಿ ಪ್ರವಾಸಿಸಲು ಟಿಕೇಟ್ ಕೊಡತ್ತಾರೋ ಎಂದು ಗೊಣಗುತ್ತಾನೆ" (ಪುಟ ೩)

ಈ ಕಾದಂಬರಿಯಲ್ಲಿ ನಾರಾಯಣನ ಮನಸ್ಥಿತಿ ಯಾವ ರೀತಿ ಕೆಲಸ ಮಾಡಿದೆ ಎಂದರೆ ಅವನು ಆ ರೈಲನ್ನು

> "ಕೆಟ್ಟದನ್ನೇ ಕೊಡುವ ಕಲಿಯುಗದ ಕಲ್ಪವೃಕ್ಷವೆ ಈ ಟ್ರೈನು" (ಪುಟ ೪)

ಎನ್ನುವಷ್ಟರ ಮಟ್ಟಿಗೆ ಅವನ ಮನಸ್ಸು ಕೆಲಸ ಮಾಡಿದೆ.

> "ಕುರುಕ್ಷೇತ್ರದ ರಣರಂಗದ ಮೇಲೆ ಕೃಷ್ಣನಿಗೆ ಹೊಳೆದಂತೆ ಥರ್ಡ್‌ಕ್ಲಾಸ್ ಕಂಪಾರ್ಟ್‌ಮೆಂಟ್ ನಾರಾಯಣನಿಗೆ ಅನ್ನಿಸಿತು" (ಪುಟ ೬)

ನಾರಾಯಣನಿಗೆ ತನ್ನ ಜಾತಿ ಮತ್ತು ಧರ್ಮದ ವಿಷಯವಾಗಿ ಅಭಿಮಾನವಿದ್ದಿರಲಿಲ್ಲ. ಅದಕ್ಕಾಗಿ ನಾರಾಯಣ ಒಂದು ವಿಷಯ ಹೇಳುತ್ತಾನೆ.

"ಪ್ರಸಂಗ ಒಂದಲ್ಲ ಹಳ್ಳಿಯ ಹುಡುಗೆಯನ್ನೆ ಮದುವೆಯಾದರೆ ತಪ್ಪೇನು ಸಮಾಜ ಸುಧಾರಣೆಯ ಒಂದು ಕೆಲಸವನ್ನೇ ಮಾಡಿದಂತಾಗುತ್ತದೆ" (ಪುಟ ೮)

ಎನ್ನುವಲ್ಲಿಯೂ ಕೂಡಾ ಲೇಖಕರು ನಾರಾಯಣನ ಮನಸ್ಸಿಗೆ ಹೆಚ್ಚಿನ ಆದ್ಯತೆ ಕೊಟ್ಟಿದ್ದಾರೆ. ಈ ಕಾದಂಬರಿಯಲ್ಲಿ ನಾರಾಯಣನ ವ್ಯಕ್ತಿಪ್ರಜ್ಞೆಯ ಜೊತೆಗೆ ಸಮಾಜದ ಕಾರ್ಯವು ಕೂಡಾ ಒಂದು ಮುಖ್ಯ ಧ್ಯೇಯವಾಗಿ ಮೂಡಿಬಂದಿದೆ. ನಾರಾಯಣನು ರೈಲಿನಲ್ಲಿ ಪ್ರವಾಸ ಕೈಗೊಂಡಾಗಿನಿಂದಲೇ ಅವರಿಗೆ ಸಮಾಜ ಕಾರ್ಯ ಕೈಗೊಳ್ಳುವ ಹುಚ್ಚು ಹಿಡಿಯಿತು. ಈ ರೈಲಿನ ಪ್ರವಾಸದಲ್ಲಿ ಕಂಡುಬಂದ ಜನರ ದೈಹಿಕ ಸ್ವಾಸ್ಥ್ಯವನ್ನು ನೋಡಿ ನಾರಾಯಣ ಒಂದು ವ್ಯಾಯಾಮ ಶಾಲೆಯನ್ನು ಸ್ಥಾಪಿಸಿ ಅಲ್ಲಿ ಹಳ್ಳಿಯ ಜನರನ್ನು ದಾಷ್ಟ್ಯರನ್ನಾಗಿ ಮಾಡಬೇಕೆಂಬುದು ಅವನ ಆಸೆ ಅಷ್ಟೇ ಅಲ್ಲದೆ

"ಹಳ್ಳಿಯ ಜನರೆಂದರೆ ಮಹಾ ಹೊಲಸು ಹೊಗೆಸೊಪ್ಪು ಸೇದಲೇಬಾರದು ಎಂಬ ನಿಯಮವನ್ನು ಗೊತ್ತು ಮಾಡಲೇಬೇಕು ಈ ವ್ಯಾಯಾಮಶಾಲೆಯಲ್ಲಿ" (ಪುಟ ೨೭)

ಒಂದು ಸುಧಾರಣೆ ಕೈಗೊಂಡರೆ ಹಳ್ಳಿಯ ಉದ್ಧಾರವಾಗುತ್ತದೆ. ಎಂಬುದು ನಾರಾಯಣನ ಆಸೆ.

"ಲಕ್ಷಾವಧಿ-ಕೋಟ್ಯಾವಧಿ ರೂಪಾಯಿಗಳನ್ನು ಸುರುವಿ ರೈಲು ದಾರಿಯನ್ನು ಹಾಕಿಸಿದವರಿಗೆ ಸರಳಮಾರ್ಗ ಮಾಡಿಸಿದರೆ ಬೊಕ್ಕಸ ಬರಿದಾಗುತ್ತಿತ್ತೇನೋ?... ಥೂ.. ಕೆಳಗೆ ಮತ್ತೆ ಯಾರ ಮೇಲೂ ನುಗ್ಗಬಾರದೂ ಎಂದು ಕೆಳಗೆ ನೋಡಿದರೆ ಗೋಣು ನೋವಾಗುವುದು.. ಆಆವ್... ಉರ್ಧ್ವಮುಖ ತಪಸ್ಸು.. ಸರಳಮಾರ್ಗವನ್ನೇ ಕೊರೆದಿದ್ದರೆ ಏನು ಗಂಟು ಹೋಗುತ್ತಿತ್ತೋ? ನಡ-ನಡುವೆ ಅಡ್ಡ-ತಿಡ್ಡಾ ಸೊಟ್ಟ-ಡೊಂಕ... ಅಬ್ಬ? ಬುದ್ಧಿಪೂರ್ವಕವಾಗಿಯೆ ಮಾಡಿರುವರೂ ಏನೊ?... ಪ್ರಕಟಣೆ ಬೇರೆ ಹಚ್ಚಿರುವರಲ್ಲ ಪ್ರವಾಸಿಗರ ಅಜಾಗರೂಕತೆಯಿಂದ ಏನಾದರೂ ಅಪಾಯ ಸಂಭವಿಸಿದರೆ ರೈಲ್ವೆಯವರು ಜವಾಬ್ದಾರರಲ್ಲ" (ಪುಟ ೨೮)

ಎಂಬಲ್ಲಿ ವ್ಯಕ್ತಿಪ್ರಜ್ಞೆಯ ಅವಶ್ಯವನ್ನು ಕಾಣಬಹುದಾಗಿದೆ. ಯಾವುದೂ ಅಪಘಾತ ಇಲ್ಲದೇ ಈ ರೈಲ್ವೆಯ ಪ್ರವಾಸ ಕೊನೆಯಾಯಿತು.

"ಅಂದರೆ ಇನ್ನೊಂದು ನಾಲ್ಕೊಪ್ಪತ್ತು ಜೀವದ ಹೆದರಿಕೆ ಇಲ್ಲದೆ ಪ್ರವಾಸ ಮಾಡಬಹುದು. ಈ ಕೌನ್ಸಿಲ್ ಮೆಂಬರರಿಗೆ ಸರಕಾರಿ ಅಧಿಕಾರಗಳಿಗೆ ಥರ್ಡ್‌ಕ್ಲಾಸಿನ ಪಾಸ್ ಯಾಕೆ ಕೊಡಬಾರದು ಬರಿಯ ಪಾಸು ಕೊಟ್ಟರಲ್ಲ ಅವರನ್ನಲ್ಲಿ ಗಟ್ಟ ಕುಕ್ಕರಿಸುವಂತೆ ಪೊಲೀಸರ ಬಂದೋಬಸ್ತ ಇಡಬೇಕು" (ಪುಟ ೨೯)

ಎಂಬಲ್ಲಿ ಈ ರೈಲ್ವೆ ಪ್ರವಾಸ ಕಥಾನಾಯಕನ ಮನಸ್ಸಿನಲ್ಲಿ ಹುಟ್ಟುಹಾಕಿದ ವಿಚಿತ್ರ ಮನಸ್ಥಿತಿಯನ್ನು ಹಾಗೂ ಸಮಾಜ ಸುಧಾರಣೆಯೇ ಈ ಸಮಸ್ಯೆಗಳಿಗೆ ಪರಿಹಾರವೆಂಬಂತೆ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

ಡ್ರಾಯವ್ವರ ಮತ್ತು ಬಿಚ್ಚು ಗಾವಲಿನ ನಡುವೆ ಸೆರೆ ಸಿಕ್ಕುಬಿಟ್ಟು ಸಮಾಜ ಸುಧಾರಕ [illegible] ಎಂಬಲ್ಲಿ ಸಮಾಜ ಪ್ರಜ್ಞೆ ಮತ್ತು ವ್ಯಕ್ತಿಪ್ರಜ್ಞೆ ಅಂಶಗಳನ್ನು [illegible] ಎಂದಿದ್ದಾರೆ ಒಂದು ಕಡೆ ನಾರಾಯಣನ ಜೀವನದಲ್ಲೂ ಮೊದಲ ಘಟ್ಟದಲ್ಲಿ ಈ ಮಾತು ಸತ್ಯವೆನಿಸುತ್ತದೆ. ನಂತರ ಘಟ್ಟದಲ್ಲಿ ಅದು ಬದಲಾಗಿದೆ. ಕೊನೆಯ ಘಟ್ಟದಲ್ಲಿ ಬರುವ ಪ್ರಸಂಗದಿಂದ ಕೇವಲ ಸಮಾಜಪ್ರಜ್ಞೆಯಷ್ಟೇ ಅಲ್ಲದೇ ಅದರ ಆನ್ವಯಿಕತೆಗೆ ಕೂಡ ಪ್ರಾಧಾನ್ಯತೆ ದೊರೆತಿರುವುದು ಕಂಡುಬರುತ್ತದೆ.

ಶಾಸ್ತ್ರದ ಆಧಾರದಿಂದಲೇ ಬೆಳಿಗ್ಗೆ ಬಂದ ಕೂಡಲೇ ಹುಡುಗರಿಗೆಲ್ಲ ಒಂದೊಂದು ಬಟ್ಟಲು ಹಾಲು ಕೊಡಿಸುವ ವ್ಯವಸ್ಥೆಯನ್ನು ಮಾಡಿಸಿದ್ದನು. "ಹುಡುಗರು ಅಂದರೆ ಬಾಲಗೋಪಾಲನ ಅವತಾರ ಇದ್ದ ಹಾಗೆ" ಎನ್ನುತ್ತಿದ್ದರು. ಹುಡುಗರಿಗೆ ಕೊಡತಕ್ಕ ಫೀ (fee=ವೇತನ ಹಣ)ದ ಬದಲು ತಂದೆ ತಾಯಂದಿರು ಅವರಿಗೆ ಹಾಲು-ಹಣ್ಣು ಕೊಡಿಸಬೇಕು. ಅದರ ಜವಾಬ್ದಾರಿ ಶಿಕ್ಷಕರದು ಎಂಬುದೂ ಅವನದೊಂದು ತತ್ವ. ಅದಕ್ಕಾಗಿ ರಾಜಕಾರಣದಲ್ಲಿ ಆಸಕ್ತಿ ಇಲ್ಲದಾಗೊ ಗೋವಧೆ ನಿಲ್ಲಿಸುವ ಯತ್ನದಲ್ಲಿ ನೆರವಾಗಿದ್ದನು. ಮುಸಲ್ಮಾನ ಬಂಧುಗಳಿಗೂ ತಿಳಿಸಿದ್ದನು-ಎಷ್ಟೋ ಮುಂದಾಳುಗಳಿಗೆ ಮನವರಿಕೆಯಾಗಿತ್ತು. ಆ ಮಾತು-ಯಾವ ಜಾತಿಯ ಮಗುವಾದರೂ ಹಾಲು ಅದಕ್ಕೆ ಹಿತಕರವಾದುದು ಎಂದು.

ಅಲ್ಲಲ್ಲಿ ಸಾಮಾಜಿಕ ಸಂನ್ಯಾಸದ ಪ್ರಸ್ತಾಪ ಬರುತ್ತದಾದರೂ ತತ್‌ಕ್ಷಣ ನಾರಾಯಣನ ಮನಸ್ಸು ಸಾಮಾಜಿಕ ಪರಿವರ್ತನೆಯೆಡೆಗೆ ತುಡಿಯುತ್ತದೆ. ಒಂದರ್ಥದಲ್ಲಿ ಸಮಾಜದಲ್ಲಿ ಹುಟ್ಟಿದ ಮನುಷ್ಯ ಸಮಾಜದಲ್ಲಿಯೇ ಇದ್ದು, ಸಮಾಜದಲ್ಲಿಯೇ ಲೀನವಾಗುತ್ತಾನೆ ಎಂಬ ಧ್ಯೇಯವಾಕ್ಯದಂತಿದೆ ನಾರಾಯಣ ಪಾತ್ರ. ಪ್ರಜ್ಞೆಯೊಂದು ಪರಿಸರದ ಶಕ್ತಿಯಗುವ ಪ್ರಕ್ರಿಯೆಯ ಧ್ವನಿ ಇಡೀ ಕಾದಂಬರಿಯಲ್ಲಿದೆ.

ಈ ರೀತಿಯಾಗಿ ಕಾದಂಬರಿಯಲ್ಲಿ ನಾರಾಯಣನ ಪಾತ್ರವನ್ನು ಹಿನ್ನೆಲೆಯಾಗಿಟ್ಟುಕೊಂಡು ವ್ಯಕ್ತಿಪ್ರಜ್ಞೆ ಮತ್ತು ಸಮಾಜ ಕಾರ್ಯದ ಬಗೆಗೆ ಇರುವ ಅಭಿಪ್ರಾಯವನ್ನು ವಿಭಿನ್ನ ಸ್ತರಗಳಲ್ಲಿ ಚಿತ್ರಿಸಿದ್ದಾರೆ.

ನಾರಾಯಣನ ಪಾತ್ರ ಸೃಷ್ಟಿಯ ಆದಿಯಿಂದ ಹಿಡಿದು ಮೂರನೆಯ ಭಾಗದವರೆಗೂ ಬಂಡಾಯ ಮತ್ತು ಪರಂಪರೆ ಎಂಬ ಅಂಶವನ್ನು ಲೇಖಕರು ಸಮಗ್ರವಾಗಿ ಮತ್ತು ಸಮುಚಿತವಾಗಿ ಉಪಯೋಗಿಸಿದ್ದಾರೆ ಎನ್ನಬಹುದು ಬಹುಶಃ ಪಾತ್ರಧಾರಿಯ ಪ್ರಧಾನ ಕೇಂದ್ರ ಈ ೨ ಅಂಶಗಳೇ ಇಲ್ಲಿ ಕೆಲವು ಸನ್ನಿವೇಶಗಳ ಮೂಲಕ ಈ ಅಂಶವನ್ನು ಚರ್ಚಿಸಲಾಗಿದೆ.

> "ಹೆಣ್ಣು ಮಕ್ಕಳಿಗೆ ಮೊದಲು ಗಂಡನ ಮನೆಗೆ ಸೇರುವಾಗ ಹೆಸರು ಬದಲಾಯಿಸಿಕೊಳ್ಳುವಂತೆ ಗಂಡು ಹುಡುಗರು ಕೂಡಾ ನೌಕರಿಯನ್ನು ಸೇರುವಾಗ ಜಾತಿಯನ್ನು ಯಾಕೆ ಬದಲಾಯಿಸಿಕೊಳ್ಳಬಾರದು"

ಈ ಜಾತಿಯ ವಿಷಯವಾಗಿ ಇದ್ದ ಪರಂಪರೆಯನ್ನು ಬಂಡಾಯದ ಮೂಲಕ ಹೊಡೆದು ಹಾಕಬೇಕೆನ್ನುವುದು ನಾರಾಯಣ ಗುರಿಯಾಗಿತ್ತು.

> "ತನ್ನ ಮದಿವೆಯಲ್ಲಿ ಎಲ್ಲರೂ ಕೂಡಿ ಒಮ್ಮೆಲೆ ಕಿರುಚಿದ ಮಂಗಳವು ಸಮಾಜವು ಗೋಳಿಡುವ ಕೂಗಿನಂತೆ ಕೇಳಿಸಿತು ಈ ನಾರಾಯಣನಿಗೆ ಯಾರ ಮದಿವೆ! ಯಾರ ಸಂಭ್ರಮ! ಎಲ್ಲವನ್ನು ಬಿಟ್ಟುಕೊಟ್ಟು ಮದಿವೆಯ ಮಂಟಪದ ಧೂಳುಚಾಡಿಸಿ ತಾನು ಓಡಿ ಬಂದುದಕ್ಕೆ ಅವನಿಗೆ ಈಗ ಸಮಾಧಾನವಾಯಿತು. ತನ್ನ ತಾಯ್ತಂದೆಯರು ಗೋಳಿಡುವರು ಇಡವಲ್ಲರೇಕೆ? ಮುದುಕರು ಸಂಕಟದಲ್ಲಿ ಸಿಲುಕಿದರೆ ನರಳುವರು ತನ್ನ ಮದಿವೆ ಹೂಡಲು ಅವರಿಗೆ ಯಾರು ಹೇಳಿದ್ದರು? ತನಗೂ ವಿಚಾರ-ಸ್ವಾತಂತ್ರ್ಯವಿದೆ ತನಗೂ ಸಮಾಜದಲ್ಲಿ ಯೋಗ್ಯತೆ ಇದೆ, ತನಗೂ ವ್ಯವಹಾರದಲ್ಲಿ ಜಾಣ್ಮೆ ಇದೆ" (ಪುಟ ೩)

ಈ ಮಾತು ನಾರಾಯಣನ ಬಂಡಾಯ ಪ್ರವೃತ್ತಿಯನ್ನು ಪರಂಪರೆಗೆ ವಿರುದ್ಧವಾಗಿಯೂ ತನ್ನ ನಿಲುವುಗಳನ್ನು ಸ್ಪಷ್ಟಪಡಿಸಬೇಕೆಂಬ ಧೋರಣೆಯನ್ನು ಎತ್ತಿತೋರಿಸುತ್ತದೆ.

ನಾರಾಯಣನು ಪರಂಪರೆಯ ವಿರೋಧಿ ಎನ್ನುವುದಕ್ಕೆ ಈ ಸಂದರ್ಭ ಅನ್ವಯವಾಗುತ್ತದೆ.

> "ವಿಷ್ಠಾ-ಮೂತ್ರ-ಕಫೋತ್ಸರ್ಗಂ ಅಪಾರಾಧಂ ಕ್ಷಮಸ್ವಮೇ ಎಂದು ಭೂದೇವಿಗೆ ದಿನಾಲು ಬೇಡಿಕೊಳ್ಳುವ ಜಾತಿಯಿದು! ಬ್ರಾಹ್ಮಣರೆ ಹಾಗೆಂದ ಮೇಲೆ ಮಿಕ್ಕವರ ಗತಿ ಏನು? ತಾನೂ ಬ್ರಾಹ್ಮಣನೆ ಎಂಬುದು ಸ್ಮರಣೆಗೆ ಒಂದು ಒಂದಿಷ್ಟು ವಿಷಾದವಾಯಿತು ಅವನಿಗೆ ಹುಟ್ಟಿ ೨೩ ವರ್ಷಗಳಾದರೂ ನಾರಾಯಣನಿಗೆ ಇನ್ನು ತನ್ನ ಜಾತಿಯ ವಿಷಯವಾಗಲಿ ಧರ್ಮದ ವಿಷಯವಾಗಲಿ ಅಭಿಮಾನವಿದ್ದಿರಲಿಲ್ಲ. ಹಾಗೆ ನೋಡಿದರೆ ಆ ವಿಷಯವಾಗಿ ಅವನು ವಿಚಾರವನ್ನೇ ಮಾಡಿರಲಿಲ್ಲ ತನ್ನ ವಯಸ್ಸಿನ ಆರನೆಯ ವರ್ಷದಲ್ಲಿ ತನ್ನನ್ನು ಮೊದಲು ಶಾಲೆಗೆ ಕಳುಹಿಸಿದಾಗ ಜಾತಿ ಯಾವುದು? ಎಂಬುದಕ್ಕೆ ಬ್ರಾಹ್ಮಣ ಎಂದು ತನ್ನ ತಂದೆಯವರು ಉತ್ತರ ಕೊಟ್ಟಿದ್ದರು ಅದೇ ಮೊದಲನೆಯ ಸಲ ಅವನು ತನ್ನ ಜಾತಿಯ ಕಲ್ಪನೆಯನ್ನು ಮಾಡಿಕೊಂಡದ್ದು ಆದರೂ ಸಾಲೆಯ ಮಕ್ಕಳೊಂದಿಗೆ ಒತ್ತಟ್ಟಿಗೆ ಆಡಿ ಕುಣಿದು ಹೊತ್ತು ಕಳೆಯುವಾಗ ಅವನಿಗೆ ಜಾತಿಯ ಮರ್ಮ ಅಷ್ಟೊಂದು ತಿಳಿದಿರಲಿಲ್ಲ" (ಪುಟ ೭)

ಈ ರೀತಿಯಾಗಿ ಕಾದಂಬರಿಯುದ್ದಕ್ಕೂ ನಾರಾಯಣನ ಪಾತ್ರದ ಮೂಲಕ ಬಂಡಾಯ ಮತ್ತು ಪರಂಪರೆಯನ್ನು ಚಿತ್ರಿಸಿದ್ದಾರೆ.

ಮೂರನೆಯ ಅಂಶವಾಗಿ ಅಜ್ಞಾನ ಮತ್ತು ಶಿಕ್ಷಣವನ್ನು ಕೂಡಾ ನಾರಾಯಣನ ಪಾತ್ರದ ಮೂಲಕ ಲೇಖಕರು ಹೀಗೆ ಚಿತ್ರಿಸಿದ್ದಾರೆ.

ಕಂಪಾರ್ಟ್‌ಮೆಂಟಿನಲ್ಲಿ ಕುಳಿತಾಗ ಬದಿಯಲ್ಲಿ ಕುಳಿತವನೊಬ್ಬ ಬಲವಾದ ತೂಕಡಿಕೆಯಿಂದ ಬಿದ್ದುಬಿಟ್ಟಿದ್ದ. ನಾರಾಯಣನ ಭುಜದ ಮೇಲೆ ಮತ್ತೆ ಬೇರೆಯವರು ಬೀಳದಂತೆ ನೋಡಿಕೊಳ್ಳುವುದು

ಹಾಗೂ ಮಲಗಿದವನನ್ನು ಎಚ್ಚರಿಸುವುದು ಈಗ ಅನಿವಾರ್ಯವಾಗಿತ್ತು ಅದೇಕೋ ನಾರಾಯಣನಿಗೆ ತಟ್ಟನೆ ಆಲೋಚನೆಗೆ ಬಂದಿತು.

"ಮಲಗಿದವನನ್ನು ಎಚ್ಚರಿಸುವುದೂ, ಸಿಟ್ಟಿಗೆದ್ದವನನ್ನು ಸಂತಯಿಸುವುದು ಹುಡುಗರ ಹಟವನ್ನು ಹಾದಿಗೆ ತರುವುದು ನೆರೆಮನೆಯ ನಾಯಿ ಬೊಗಳುವಾಗ ಕಲ್ಲೊಗೆಯದೆ ಅದನ್ನು ಹೊಡೆದೋಡಿಸುವುದೂ ಇನ್ನೊಬ್ಬರ ಎಲೆಯಲ್ಲಿ ಸಿಡಿಯದಂತೆ ನಿಂಬೆಯ ಹಣ್ಣಿನ ರಸವನ್ನು ಹಿಂಡುವುದೂ ನಾವು ಹಾಯ್ದುಹೋಗುತ್ತಿರುವಾಗಲೆ ತಮ್ಮ ಅಂಗಡಿಯ ಮುಂದೆ ನೀರಿನ ತಳಿಯನ್ನು ಸಿಂಪಡಿಸುವ ಬುದ್ಧಿ ಅಂಗಡಿಯವರಿಗೆ ಬರದಂತೆ ಮಾಡುವುದು ಇಂತಹ ಮೊದಲಾದ ವಿಷಯಗಳಲ್ಲಿ ಶಿಕ್ಷಣವನ್ನು ಕೊಟ್ಟರೆ ಒಳಿತಾಗಲಿಕ್ಕಿಲ್ಲವೆ? ವ್ಯವಹಾರದ ರೂಢಿಯಾದಂತಾಗುವುದು ಅವನ್ನೆಲ್ಲಾ ಬಿಟ್ಟುಕೊಟ್ಟು 'ಯಾತ್ಕೂ ಭಾರ ತಲೆಗ, ಭಾರ' ಎನ್ನುವಂತೆ ಓದಿ ನಾರಾಯಣನಿಗೆ ಭುಜದ ಮೇಲಿನ ಜವಾಬ್ದಾರಿಯು ಬೆಳೆದಂತೆ ಭಾಸವಾಗುತ್ತಿತ್ತು. ಮಲಗಿದಾಗ ಮನುಷ್ಯನ ಭಾರ ಹೆಚ್ಚಾಗಬೇಕೇಕೆ? ಸಾಯುವಾಗ ದೇಹದ ಒಜ್ಜೆ ಮಿತಿ ಮೀರಿರುವುದೆಂದು ಸಾವಿಗೆ ದೀರ್ಘ ನಿದ್ರೆ ಎನ್ನುವುರೋ ಏನೋ? ಈ ಹುಚ್ಚು ವಿಚಾರಗಳ ಭರದಲ್ಲಿ ಒಬ್ಬನ ನಿದ್ರೆಯಿಂದ ತನಗೆ ಸಾವು ಬರಬಹುದೆಂಬ ಭೀತಿ ಬಂದಿತು ನಾರಾಯಣನಿಗೆ ಆದರೂ ಮಲಗಿದವನನ್ನು ಎಚ್ಚರಿಸುವುದು ಹೇಗೆ ಎಂಬ ತೊಡಕು ಬಿಡಲಿಲ್ಲವಲ್ಲ ಎದುರಿನ ಫಳಿಯ ಕೆಳಗಿರುವ ನೀರಿನ ತಂಬಿಗೆ ಅವನ ದೃಷ್ಟಿಗೆ ಬಿದ್ದಿತು... ಅಹುದು... ಮಲಗಿದವನ ಮುಖದ ಮೇಲೆ ನೀರನ್ನು ಸಿಂಪಡಿಸಿದರೆ ಅವನು ಏಳುವುದು ಖಂಡಿತ... ಅದೇನೂ ಹೇಳುವರಲ್ಲ ಥಪ್ಪನ್ನು ಭಾಷೆಗಳನ್ನು ಒಂದೇ ಪ್ರೌಢಿಮೆಯಿಂದ ಒಂದೇ ಸಹಜತೆಯಿಂದ ಮಾತನಾಡುವವನ ಮಾತೃಭಾಷೆ ತಿಳಿದುಕೊಳ್ಳಲು ನೀರನ್ನು ಸಿಂಪಡಿಸಿದರಂತೆ.. ಹಾಗೆ.. ಇವನ ಮುಖದ ಮೇಲೆ ನೀರನ್ನು ಸಿಂಪಡಿಸಿದರೆ? ಎಚ್ಚರವಾಗಬಹುದಲ್ಲವೆ? ಕೂಡಲೆ ಅಯ್ಯೋ ಬೇಡ ಬೇಡ ಎನ್ನಿಸಿತು ನೀರು ಸಿಂಪಡಿಸಿದರೆ ಬರಿಯ ಎಚ್ಚರವಾಗುತ್ತಿದ್ದರೆ ಅಡ್ಡಿಯಿರಲಿಲ್ಲ. ಆದರೆ ಮಾತೃಭಾಷೆಯಲ್ಲಿ ಮಾತನಾಡುವುದು ಬೇರೆ ಇದೆಯಲ್ಲ ಬಿಸಿಲು ಹೊತ್ತಿನಲ್ಲಿ ಮಲಗಿದವನನ್ನು ಹಟಾತ್ತಾಗಿ ಎಚ್ಚರಿಸಿದರೆ ಅವನು ಎಂತಹ ಮಾತುಗಳನ್ನಾಡುವನೆಂಬ ವಿಷಯ ನಾರಾಯಣನಿಗೆ ಸಂಶಯವೇ ಇದ್ದಿಲ್ಲ... ಮಾಡುವುದೇನು? ಒಂದು ಕ್ಷಣದಲ್ಲಿ ನಾರಾಯಣನಿಗೆ ತನ್ನ ಶಿಕ್ಷಣದ ಸಲುವಾಗಿ ಅತ್ಯಂತ ತಿರಸ್ಕಾರವುಂಟಾಯಿತು ತಾನು ಯಾವುದಕ್ಕೂ ನಿರುಪಯೋಗಿ ಎಂದು ತನ್ನಲ್ಲಿ ತಾನೇ ಕೋಪಿಸಿಕೊಂಡ... ತನಗೆ ಹಾಳು ಶಿಕ್ಷಣವಿಲ್ಲದಿದ್ದರೆ ಅವನು ಆ ಮಲಗಿದ ಮನುಷ್ಯನು ಮಾತನಾಡಬಹುದಾದ ಶಬ್ದಗಳ ಹೆದರಿಕೆಯೆ ತನಗಿರುತ್ತಿರಲಿಲ್ಲ" (ಪುಟ ೯)

ಇಲ್ಲಿ ಜನರ ಅಜ್ಞಾನದಿಂದ ನಾರಾಯಣನಿಗೆ ಇರುವ ಶಿಕ್ಷಣ ಪ್ರಜ್ಞೆ ಕೂಡಾ ಜಿಗುಪ್ಸಿತವಾಗುತ್ತದೆ.

"ನಾರಾಯಣನಿಗೆ ತನ್ನ ಶಿಕ್ಷಣಕ್ಕಾಗಿ ಅಬಿಮಾನ ಬಂದಿತು ತಾನು ಸುಶಿಕ್ಷಿತನು ಯಾವ ವಿಚಾರವಿಲ್ಲದೆ, ಯಾವ ಹೆದರಿಕೆ ಇಲ್ಲದೆ, ಯಾವ ಸಂಶಯವಿಲ್ಲದೆ ತನ್ನ ಟಿಕೆಟ್ಟನ್ನು

ಯಾವಾಗಲೂ ನಿಧಾನವಾಗಿ ತೋರಿಸಿದ್ದ ಪ್ರಳಯಕಾಲದ ಒಂದೂ ಸೂಚನೆಗಳಿಲ್ಲದೆ ಆ ಅಧಿಕಾರಿಯು ಅದನ್ನು ನೋಡಿ ಹೋಗಿದ್ದ ಈಗ ನೋಡಬಾರದೆ? ಅದೆ ಆ ಮುದುಕ! ಅದೇನು ಪೆಚ್ಚು ಕಳೆ! ಮಾತನಾಡಲೂ ದನಿ ಸಾಲದು! ಅಬ್ಬ! ತಗ್ಗು ಇದ್ದಲ್ಲಿ ನೀರಿನ ಅಬ್ಬರ! ಈ ಅಧಿಕಾರಿಗಳ ದರ್ಪವಾದರೂ ಎಷ್ಟು! ಪಾಪ! ಈ ಅಸಂಸ್ಕೃತರ ಹಣೆಬರಹ! (ಪುಟ -೧೫)

ಇದು ಜನರ ಅಜ್ಞಾನ ಹಾಗೂ ಶಿಕ್ಷಣದ ಪ್ರಭಾವವನ್ನು ಸಮರ್ಥಿಸಿದೆ.

"ಮುಖವೆತ್ತಿ ನೋಡಿದ 'ಕವಿ'ಯ ಕುತ್ತಿಗೆಗೆ ಅರ್ಧಚಂದ್ರ ನಾರಾಯಣನಿಗೆ ಅತ್ಯಂತ ವ್ಯಸನವಾಯಿತು ಒಂದು ವೇಳೆ ತನ್ನ ತಪ್ಪಿಲ್ಲದೆ ಆ ಹಳ್ಳಿಗನು ಇದನ್ನೆಲ್ಲ ಅನುಭೋಗಿಸುತ್ತಿದ್ದರೆ? ಓದು-ಬರೆ ಬಾರದ್ದು ಅವನ ತಪ್ಪೆ ಇಲ್ಲಿ ನಿಜವಾಗಿ ಇಂತಹ ಕಾಯಿದೆಯನ್ನೆ ಗೊತ್ತು ಪಡಿಸಬೇಕು. ಓದು-ಬರೆ ಬಾರದವನಿಗೆ ೬ ತಿಂಗಳು ಶಿಕ್ಷೆ ಎಂದು ಶಿಕ್ಷೆ ಕೊಡುವುದೆಂದರೆ ಅವನನ್ನು ಹೊಡೆದು ಬಡೆದು ಗೋಳಿಸಬೇಕೆಂದಲ್ಲ ಶಾಲೆಗೆ ಕಳುಹಿಸಬೇಕೆಂದರೂ ಒಂದಿಲ್ಲ ಒಂದು ನೆವದಿಂದ ತಪ್ಪಿಸಿಕೊಳ್ಳುವ ಜನ ಇದು ಅದಕ್ಕಾಗಿ ಶಿಕ್ಷೆಯ ನೆವದಿಂದ ೬ ತಿಂಗಳುಗಳಲ್ಲಿ ಅಕ್ಷರ ಬಳಕೆಯನ್ನು ಮಾಡಿಕೊಟ್ಟರಾಯ್ತು... ಏನಿಲ್ಲ ಹಳ್ಳಿಯಲ್ಲಿಯೆ ಇದ್ದುಕೊಂಡು ಬಿಡುವೆ ಹಳ್ಳಿಯ ಪುನರುದ್ದಾರ ಮಾಡುವೆ..." (ಪುಟ ೧೮)

ಈ ಸಂದರ್ಭದಲ್ಲಿ ಲೇಖಕರು ಹಳ್ಳಿಗನೊಬ್ಬನ ಮೂಲಕ ಅವನ ಅಜ್ಞಾನದ ಪರಕಾಷ್ಠೆಯನ್ನು, ನಾಯಕನ ಶಿಕ್ಷಣ ಪ್ರಭಾವವನ್ನು ಇಲ್ಲಿ ತೋರಿಸಿಕೊಟ್ಟಿದ್ದಾರೆ. ಒಟ್ಟಿನಲ್ಲಿ ಈ ಸಂದರ್ಭದ ಮೂಲಕ ಎರಡು ಪ್ರಮುಖ ಅಂಶಗಳನ್ನು ಹೇಳಿದ್ದಾರೆ.

ಲೇಖಕರು ಹೇಳುವಂತೆ ಸಣ್ಣೂರು ಎಂಬ ಹಳ್ಳಿ ಜನಗಳ ವಿವರಣೆಯನ್ನು ನೀಡುತ್ತಾ ಹೀಗೆ ಹೇಳುತ್ತಾರೆ.

"ಅಷ್ಟೇಕೆ ಸಮೀಪದ ಹಳ್ಳಿಗಳಲ್ಲಿ-ಅದೇಕೆ? ಹಳ್ಳಿದಾಚೆಯ ನಿಡೂರಿನ ಅಕ್ಕಸಾಲಿಗೆ ಹನುಮಂತನ ಮಗ ಸೋಮಪ್ಪನೂ ಕೂಡ ಇಂಗ್ಲೀಷ್ ಕಲಿತರೂ ಸಣ್ಣೂರಿನವರು ತಮ್ಮ ಪೂರ್ವ ಸಂಸ್ಕಾರವನ್ನು ಬಿಟ್ಟಿರಲಿಲ್ಲ. ಆ ಸಂಸ್ಕಾರವನ್ನು ಬಿಟ್ಟ ಒಬ್ಬನೇ ಒಬ್ಬನಾದ ಶ್ರೀನಿವಾಸ ನಾಯಕನನ್ನು ಮಾತ್ರ ಕಣ್ಣೆತ್ತಿ ನೋಡಿರಲಿಲ್ಲ ಅದೇನು ಹುಚ್ಚು ಆ ಶೀನಪ್ಪನದು? ನಡೆದು ಬಂದ ನೆಮ್ಮದಿಯನ್ನು ಬಿಟ್ಟು ಮಗನಿಗೆ ಇಂಗ್ಲೀಷ್ ಕಲಿಸುವುದು? ಕಲಿಯುವುದು ಯಾಕೆ? ಉಪನಯನ ಸಂಸ್ಕಾರವೊಂದಿರುವುದೆಂದಲ್ಲವೆ? ಆ ಹುಡುಗನಿಗೆ ಏನು ಕಡಿಮೆಯಿದ್ದಿತು? ಕಾಲಕ್ಕೆ ಒಂದು ಮದುವೆ ಮಾಡಿಬಿಟ್ಟಿದ್ದರೆ?

(ಪುಟ ೩)

ಈ ಮಾತು ಅಂದಿನ ಪರಂಪರಾಗತ ಮನೋಧರ್ಮವನ್ನು ಬಿಂಬಿಸುತ್ತದೆ. ವಿದ್ಯಾಭ್ಯಾಸಂಗವೆಂದರೆ ಹಣದ ದುರುಪಯೋಗ ಹಾಗೂ ಸಂಸ್ಕಾರಕ್ಕೆ ವಿರುದ್ಧ ಎಂಬುದು ಅದರ ನಿಲುವಾಗಿತ್ತು ಎಂಬುದನ್ನು

ಸ್ಪಷ್ಟವಾಗಿ ತಿಳಿಸುತ್ತದೆ. ಶಿಕ್ಷಣದ ಮಹತ್ವವನ್ನರಿಯದ ಮುಗ್ಧರಾದರೂ ಅಷ್ಟೇ ವ್ಯವಹಾರ ಚತುರರು ಎಂಬುದನ್ನು ನಾವಿಲ್ಲಿ ಗಮನಿಸಬಹುದಾಗಿದೆ.

ಕೊನೆಯ ಅಂಶವಾಗಿ ನಾರಾಯಣನ ಪಾತ್ರದ ಮೂಲಕ ವಾಸ್ತವಿಕತೆ ಮತ್ತು ಭ್ರಮಾಲೋಕವನ್ನು ಚಿತ್ರಿಸಿದ್ದಾರೆ. ಅದನ್ನು ಈ ಕೆಳಗಿನ ಸಂದರ್ಭದಲ್ಲಿ ತಿಳಿಯಬಹುದು.

> "ನಾರಾಯಣನಿಗೆ ಎಂದಿನಿಂದಲೂ ತನ್ನ ಟೊಪ್ಪಿಗೆಯ ಉಪಯುಕ್ತತೆಯ ಬಹಳವೆನ್ನಿಸಿತ್ತು ಚಿಕ್ಕವನಿದ್ದಾಗ ತಲೆಯ ಮೇಲೆ ತಂದೆ ಅಪ್ಪಳಿಸುವ ಏಟನ್ನು ತಪ್ಪಿಸುವುದಕ್ಕಾಗಲಿ ತಡೆದುಕೊಳ್ಳುವಾದಕ್ಕಾಗಲಿ ಮಿಕ್ಕ ಬಾಲಕರ ಚಿಕ್ಕ-ದೊಡ್ಡ ಒಡವೆಗಳನ್ನು ಬಚ್ಚಿಕೊಳ್ಳುವುದಕ್ಕಾಗಲಿ ಮನೆಯಲ್ಲಿಯ ತಿಂಡಿ-ತಿನಿಸುಗಳನ್ನು ಮುಚ್ಚಿಟ್ಟುಕೊಳ್ಳುವದಕ್ಕಾಗಲಿ ಹೀಗೆ ಅನೇಕ ಮಹತ್ವದ ಕಾರ್ಯಗಳಲ್ಲಿ ಟೊಪ್ಪಿಗೆಯ ಸಹಾಯ ಬೇಕಾಗುತ್ತಿತ್ತು. ಅವಶ್ಯಕತೆ ಕಂಡುಬಂದಿತ್ತು. ಸ್ವಲ್ಪ ಬಲಿತು ಬುದ್ಧಿ ಬಂದು ಹೊರಗೆ ಆಡಿ ಓಡಾಡುವಾಗ ಬಿಸಿಲಿನ ಬಳಲಿಕೆಯನ್ನು ಕಡಿಮೆ ಮಾಡಲಿಕ್ಕೂ, ಕಲ್ಲು ಹೊಡೆಯುವುದನ್ನು ಕಲಿಯುವಾಗ ಗುರಿಯೆಂದು ಮುಂದಿಟ್ಟುಕೊಳ್ಳಲಿಕ್ಕೂ ಚಂಡು ಇಲ್ಲದಾಗ ಚಂಡು ಎಂದೂ ಗುಂಡು ಇಲ್ಲದಾಗ ಗಂಡೂ ಎಂದೂ ಹೀಗೆ ಚಂದ್ರಹಾಸನಿಗೆ ದೊರೆದ ಶಾಲಿಗ್ರಾಮದಂತೆ ತನ್ನ ಬಾಲ್ಯ ಲೀಲೆಗಳಲ್ಲೆಲ್ಲ ನೆರವಾಗಿತ್ತು ನಾರಾಯಣನ ಟೊಪ್ಪಿಗೆ ಮುಂದೆ ಕಲಿತವನಾದನೆನ್ನಿಸಿದ ಮೇಲೆ ಟೊಪ್ಪಿಗೆ ಹಾಕಿಕೊಳ್ಳುವನೆಂದು ನಿಮಿತ್ತಕ್ಕಾದರೂ ತಲೆ ಇದೆ ಎಂದು ಜನರೂ ತಿಳಿದುಕೊಳ್ಳುವುದಕ್ಕೂ ಒಂದೇ? ಎರಡೇ? ಹೀಗೆ ಎಷ್ಟೊಂದು ತೆರದಿಂದ ಟೊಪ್ಪಿಗೆಯು ನಾರಾಯಣನಿಗೆ ಉಪಯುಕ್ತವಿದ್ದಿತೆಂದು ಹೇಳುವುದು" (ಪು ೭೫)

ಇಲ್ಲಿ ಟೊಪ್ಪಿಗೆಯ ಉಪಯುಕ್ತತೆ ವಾಸ್ತವದಂತೆ ಕಂಡುಬಂದರೂ ಲೇಖಕರು ಚಿತ್ರಿಸಿರುವ ಭ್ರಮಾಲೋಕ ಹೀಗೆ ಆದರೆ ಹೀಗೆ ಎಂಬುವ ಚಿತ್ರಿಕ ಗುಣ ಭ್ರಮಾಲೋಕವನ್ನು ವಾಸ್ತವಿಕತೆಯ ಏಕತ್ರ ಮೇಳಿವಿಸಿರುವ ಅವರ ಶೈಲಿ ನಿಜಕ್ಕೂ ಅದ್ಭುತ.

> "ಮೊದಮೊದಲು ನಾರಾಯಣನಿಗೆ ತಾನೆಲ್ಲೋ ಕಲ್ಪನೆಯಿಂದ ಕನಸು ಕಾಣುವನೆಂದು ತೋರಿತು ಯಾರೊ ತನ್ನ ಕೈಹಿಡಿದರು ಕನಸು ಇಲ್ಲಿ ತನ್ನ ಕೈ ಹಿಡಿದವನ ಡ್ರಾಯ್‌ವ್ಹರನು, ತಾನು ನಡೆಯುತ್ತಿರುವುದು ನೆಲದ ಮೇಲೆ ಹೋಗುತ್ತಿರುವುದು ಬಿಚ್ಚುಗಾವಲಿನ ಕಡೆಗೆ. ಮೆಲ್ಲಗೆ ಮುಖವೆತ್ತಿ ನೋಡಿದ... ಹಾಂ! ಬಿಚ್ಚುಗವಲು ಮಾಯವಾಗಿದೆ. ಎದುರು ಕಾಣಿಸುವುದು ಎತ್ತಿದ ಕೈಗಳಲ್ಲ... ಎತ್ತಿದ ಮುಖಗಳು ಏನಿದು ಸೋಜಿಗ!... 'ಉಂ' ಎಂದು ನರಳಿದ ನಾರಾಯಣ. ಬಲಗಾಲಿಗೆ ಪೆಟ್ಟು ಬಲವಾದ ಪೆಟ್ಟು ತಾಕಿತು. ಎಚ್ಚತ್ತವನಂತೆ ನೋಡುತ್ತಾನೆ ಬಸ್ಸು! ಬಸ್ಸು! ನಿಜವಾಗಿಯೆ ಇದೆ ಒಂದು ಬಸ್ಸು ಸದ್ಯಕ್ಕೆ ತನಗೆ ಅತ್ಯಂತ ಉಪಯುಕ್ತವೆನಿಸಿದಂತಹ ಬಸ್ಸು ಹಹ ಎಂತಹ ಹುಚ್ಚ ತಾನು! ಇಷ್ಟು ತಿಳಿಯಬಾರದೆ ತನ್ನಂತೆ ಎಷ್ಟು ಜನರಿಗೆ ಆ ಬಸ್ಸು ಉಪಯುಕ್ತವಿದ್ದಿರಬಹುದು? ಬಸ್ಸಿನ ಉದ್ದೇಶವೇನು ಜನರನ್ನು ಊರಿಂದೂರಿಗೆ

ಒಯ್ಯುವುದೊ, ಇಲ್ಲವೆ ಜನರಿಗೆ ಕುಳಿತುಕೊಳ್ಳಲು ಸ್ಥಳ ಮಾಡಿಕೊಡುವುದೊ?. ಯಾರಾರಿಗೆ ಊರಿಂದೂರಿಗೆ ಹೋಗುವುದಿದೆಯೋ ಅವರೆಲ್ಲರ ಸಲುವಾಗಿ ಬಸ್ಸು. ಎಷ್ಟು ಜನರಿಗೆ ಪ್ರವಾಸ ಮಾಡುವುದಿದೆಯೋ ಅವರೆಲ್ಲರಿಗೂ ಬಸ್ಸನಲ್ಲಿ ಸ್ಥಳ. ಉದಾತ್ತವಾದ ತತ್ವ! ಉಚ್ಚೃಧ್ಯೇಯ! ಈ ಬಸ್ಸಿನ ಒಡೆಯನು ಯಾವ ಪ್ರಣ್ಯಾತ್ಮನೋ? ಅವನನ್ನು ಆದರದಿಂದ ತಬ್ಬಬೇಕೆನ್ನಿಸಿತು ನಾರಾಯಣನಿಗೆ. ಎಂತಹ ಬುದ್ಧಿವಂತಿಕೆ! ಎಲ್ಲಿ ಪ್ರವಾಸಿಗರನ್ನು ಒಂದೆಡೆ ಸೇರಿಸಿ ಅವರ ಸುತ್ತಲೂ ಒಂದು ಬಸ್ಸನ್ನು ತಯ್ಯಾರಿಸಿ ಕಟ್ಟಿಸುವುದೆಂದರೆ! (ಪುಟ ೭೮)

ಈ ಒಂದು ಸಂದರ್ಭದಲ್ಲಿಯೂ ನಮಗೆ ಭ್ರಮೆ ಮತ್ತು ವಾಸ್ತವ ಅಂಶಗಳು ಕಂಡುಬರುತ್ತವೆ. ಕೊನೆಯಲ್ಲಿ ಬರುವ ಈ ಪ್ರಸಂಗ ಕೂಡಾ ವಾಸ್ತವ ಹಾಗೂ ಭ್ರಮಾಲೋಕಗಳ ಚಿತ್ರಣವನ್ನು ನಮ್ಮ ಮುಂದಿಡುತ್ತದೆ. ನಾರಾಯಣ ತರಗತಿಯಲ್ಲಿ ಪಾಠವನ್ನು ಹೇಳಲು ಆರಂಭಿಸುತ್ತಾನೆ. ಆಗ ಏನು ನಡೆಯಿತು ಎಂಬ ವಾಸ್ತವ ಘಟನೆಯ ವಿವರಣೆಯ ಜೊತೆಗೆ ಲೇಖಕರು ಕಥಾನಾಯಕ ಅಂದರೆ ನಾರಾಯಣನ ಭೂತಘಟನಾವಳಿಗಳ ವಿಮರ್ಶೆ ಮಾಡುತ್ತಾನೆ. ಆ ಪ್ರಸಂಗವನ್ನು ನೋಡಿದಾಗ ಲೇಖಕರ ನಾರಾಯಣ ಪಾತ್ರ ಸೃಷ್ಟಿಯೂ ಔಚಿತ್ಯ ಅರಿವಾಗುತ್ತದೆ:

"ಪೌರಾಣಿಕ ರೀವಿಯಲ್ಲಿ ಪೂರ್ವ ಕಥಾನುಪಂಗವನ್ನು ಹೇಳುವವನಂತೆ ಮತ್ತೆ ತನ್ನ ತಿಳಿದನಿಯಲ್ಲಿ ಓದಿದನು ಮುಂದಿದ್ದ ಪುಸ್ತಕವನ್ನು ಒಮ್ಮೆಲೆ ಸಿಡಿಲು ಆಕಾಶದಲ್ಲಿ 'ಧೋಧೋ' ಎಂದು ಮಳೆ ಸುರಿಯಿತು. ಮತ್ತೊಮ್ಮೆ ಗಹಗಹಿಸಿತು ವರ್ಗವೆಲ್ಲ ಪುಸ್ತಕವನ್ನು ಬದಿಗಿಟ್ಟು ನಗೆ ತಡೆದು ಗಾಂಭೀರ್ಯ ತಾಳಿ ಶಿಕ್ಷಕನು ತನ್ನ ದೃಷ್ಟಿಯನ್ನು ಸುತ್ತಲೂ ತಿರುಗಿಸಿದನು. ಕೊನೆಗೆ ಒಬ್ಬ ವಿದ್ಯಾರ್ಥಿಯನ್ನು ದಿಟ್ಟಿಸಿ ತಡೆದನು; ಶಿಕ್ಷಕನ ದೃಷ್ಟಿಯಿಂದಲೆ ಅವನ ಅಭಿಪ್ರಾಯ ತಿಳಿದಿತ್ತು ಆ ವಿದ್ಯಾರ್ಥಿಗೆ. 'ಇದರೊಳಗಿನ ಹಾಸ್ಯವೇನು, ಮರ್ಮವೇನು? ಎಂಬುದೇ ಶಿಕ್ಷಕನ ಅಭಿಪ್ರಾಯ ಎಂದು ತಿಳಿದುಕೊಂಡು ಆ ವಿದ್ಯಾರ್ಥಿಯು ಎದ್ದುನಿಂತು ಹೇಳತೊಡಗಿದನು. ದೇವರ ಸಲುವಾಗಿ ಧರ್ಮದ, ಸಲುವಾಗಿ ಆಚಾರದ ಸಲುವಾಗಿ ತಿರಸ್ಕಾರ ಇದ್ದಿತಿರಿ ಆ ನಾರಾಯಣಗೆ. ಆ ತಿರಸ್ಕಾರದಿಂದಲೆ ತೆಂಗು ಒಡೆದ ಅವ. ಆದರೂ ತೆಂಗು ಒಡೆಯೋದೊಂದೇ ತಡ ಮಳೆ ಆಯ್ತಾ ಇಷ್ಟರೊಳಗೆ ಮಿಕ್ಕ ಹುಡುಗರೆಲ್ಲ ದನಿಗೂಡಿಸಿ 'ಮತ್ತು ನಾರಾಯಣನ ಫಜೀತಿ ಆಯ್ತುರಿ' ಎಂದು ಅತ್ಯಂತ ಆತುರದ ದನಿಯಲ್ಲಿ ಕೇಳಿದರು ಹುಡುಗರೆಲ್ಲ ಶಿಕ್ಷಕನು ಪುಸ್ತಕವನ್ನು ಗಂಟಿನಲ್ಲಿ ಕಟ್ಟಿಡುತ್ತಾ 'ಇಲ್ಲಿಗೇ ಮುಗೀತು ಕಥೆ' ಎಂದನು ಒಬ್ಬ ಹುಡುಗನಿಗೂ ವಿಶ್ವಾಸವಾಗಲಿಲ್ಲ. 'ಮುಂದೇನಾಯ್ತುರಿ? ಮುಂದೆನಾಯ್ತುರಿ? ಎಂದು ಹಟದ ಆತುರದ ದನಿಯಲ್ಲಿ ಕೇಳಿಕೊಂಡರು 'ಕತೆ ಮುಗಿಯಿತು' ಎಂದನು ಶಿಕ್ಷಕ. 'ಅಂತೂತೆಂಗು ಒಡೆದದ್ದಕ್ಕೆ ದೇವರು ಮಳೆಕೊಟ್ಟ' ಎಂದನು ಒಬ್ಬ ವಿದ್ಯಾರ್ಥಿ. ಶಿಕ್ಷಕನು ತಟ್ಟನೆ ಮುಖವನೆತ್ತಿದನು 'ದೇವರು ಮಳೆಕೊಟ್ಟ ಅಂತ ಎಲ್ಲಿ ಹೇಳಿದೆ?' ಎಂದು ಸಂಶಯದ ದನಿಯಿಂದ 'ಮತ್ತೆ - ಧೋಧೋ ಅಂತ...' ಶಿಕ್ಷಕನು ಘೊಳ್ಳನೆ ನಕ್ಕುದಕ್ಕಾಗಿ ಚಕಿತನಾಗಿ ವಿದ್ಯಾರ್ಥಿಯು ತನ್ನ ಮಾತನ್ನು ತಡೆದನು.

'ತನಗೆಯ ಕತೆ ತಿಳಿದಿರಲಿಕ್ಕಿಲ್ಲ?' ಎಂದು ನೊಂದ ದೃಷ್ಟಿಯಿಂದ ಶಿಕ್ಷಕನನ್ನು ನೋಡಿದನು. ಅದನ್ನು ನೋಡಿ ಶಿಕ್ಷಕನೂ ನಗೆ ತಡೆದನು ಹಾಗಲ್ಲ ಎಂದನು. ವಿದ್ಯಾರ್ಥಿಗಳ ಕುತೂಹಲ ಹೆಚ್ಚಿದಂತೆ ಕಂಡುಬರಲು ಮಾತನ್ನು ಮುಂದುವರಿಸಿದನು. 'ಹಾಗಲ್ಲ ನಾರಾಯಣ ತೆಂಗು ಒಡೆದದ್ದು ತನ್ನ ತಲೆಯ ಮೇಲೆ ಅದಕ್ಕಾಗಿ ಅವನ ಕಣ್ಣಿಗೆ ಕತ್ತಲೆ ಕವಿದು ಬಿದ್ದುಬಿಟ್ಟ ಅದನ್ನು ನೋಡಿ ಉಳಿದ ಜನರು ಗಾಬರಿಯಿಂದ ಓಡುತ್ತಾ ಹೋಗಿ ನೀರು ತಂದು ಸುರುವಿದರೂ ಅವನ ತಲೆಯ ಮೇಲೆ ಕನಸು ಕಂಡವರಂತೆ ಎಚ್ಚೆತ್ತ ಮೇಲೆ ನಾರಾಯಣನಿಗೆ ಅನ್ನಿಸಿತು...'

'ನಿಮಗ ಹ್ಯಾಗ ತಿಳೀತರಿ?'

'ಕತೆ ಮುಗೀತೂ ಅಂತ ಹೇಳಿದರಲ್ಲ?'

'ಮುಗಿದರ ಮುಂದಿನ ಕತೆ ಎಲ್ಲಿಂದ ಬಂದಿತು?'

"ವಿದ್ಯಾರ್ಥಿಗಳು ಸುರಿಮಳೆಯಂತೆ ಒಂದೇ ಸಮನೆ ಕೇಳುವ ಪ್ರಶ್ನೆಗಳಿಂದ ಶಿಕ್ಷಕನು ಗಾಬರಿಗೊಂಡಂತಾದನು. ಈ ಹುಡುಗರಿಗೆ ಯಾವ ಸಮಾಧಾನವನ್ನು ಕೊಡಬೇಕು. ಎಂತಹ ಉತ್ತರವನ್ನು ಕೊಡಬೇಕು ಎಂಬ ಪೇಚಿನಲ್ಲಿ ಸಿಕ್ಕಿಕೊಂಡನು. ಕತೆ ಮುಗಿದಿಲ್ಲ ಎನ್ನಬೇಕೆ - ಮುಂದೆ ಕತೆಯೆ ಇಲ್ಲ. ಕತೆ ಮುಗಿದಿದೆ ಎನ್ನಬೇಕೆ-'ನಿಮಗೆ ಹ್ಯಾಗ ತಿಳೀತು' ಎಂದು ಕೇಳುವರು ಮಾಡಬೇಕೇನು? ಕತೆ ತನ್ನದೆ ಎಂದು ಹೇಳಿ ಬಿಡಬೇಕೆ ಅದೂ ಕಷ್ಟ ಸಾಧ್ಯ."

ಕೊನೆಯಲ್ಲಿ ಲೇಖಕರು ನಾರಾಯಣ ಪಾತ್ರದ ವಿಶ್ಲೇಷಣೆ ಮಾಡುತ್ತಾರೆ. ಇಲ್ಲಿ ನಾರಾಯಣ ತನ್ನ ಆತ್ಮಚರಿತ್ರೆಯನ್ನು ಬರೆಯುವ ನೆಪದಲ್ಲಿ ತನ್ನನ್ನೆ ತಾನು ವಿಮರ್ಶೆ ಮಾಡಿಕೊಳ್ಳುತ್ತಾನೆ. ಅಲ್ಲದೇ, ಇದು ಕಾದಂಬರಿಯ ವಿಶೇಷ ಘಟ್ಟವೆನಿಸುತ್ತದೆ. ಪಾತ್ರದ ಸಾಂದರ್ಭಿಕ ನೆಲೆಯಲ್ಲಿ ಓದುಗ ಸಾಮಾನ್ಯವಾಗಿ ಕಾದಂಬರಿಯ ಒಳಾರ್ಥ ಗ್ರಹಿಸುವುದು ವಾಡಿಕೆ. ಆದರೆ ಇಲ್ಲಿ ನೆಪವಾಗಿ ಲೇಖಕರೇ ನಿರೂಪಕರಾಗಿ, ಅದರಲ್ಲೂ ಕಥಾನಾಯಕನೇ ತನ್ನನ್ನು ವಿಮರ್ಶಿಸಿಕೊಳ್ಳುತ್ತ ಘಟನೆಗಳನ್ನು ವಿವರಿಸುವ ಕಥನಶೈಲಿ ತೀರಾ ವಾಚ್ಯವೆನಿಸಿದರೂ ಕೂಡ ಧ್ವನ್ಯಾರ್ಥ ತುಂಬ ವಿವೇಚನಾ ಪೂರ್ಣ ಎನಿಸುತ್ತದೆ. ಕೆಲವೊಮ್ಮೆ ಲೇಖಕರು ಉದ್ವೇಗಕ್ಕೆ ಒಳಗಾದಂತೆ ಕಾಣಬರುತ್ತಾರೆ. ಉದಾಹರಣೆಗೆ, ಅಕ್ಷರಗಳು ಬಳಕೆಯಾದ ನಂತರ ಶಿಕ್ಷಣಕ್ಕೆ ಪ್ರಾರಂಭ ಎಂದು ಸಾಮಾನ್ಯ ರೂಢಿ. ಆದರೆ ಅಕ್ಷರಗಳ ಬಳಕೆಗಾಗಿಯೂ ಹುಡುಗರಲ್ಲಿ ಕುತೂಹಲ ಹುಟ್ಟಬೇಕು ಎಂದು ನಾರಾಯಣನ ತತ್ವ. ಅದಕ್ಕಾಗಿ ಮೊದಲು ಸರಸವಾದ ಕತೆಗಳನ್ನು ಹೇಳುವುದು, ಆಮೇಲೆ ಸರಸವಾದ ಕತೆಗಳನ್ನು ಶಿಕ್ಷಕನೇ ಓದುವುದು-ಹೀಗೆ ಪ್ರಾರಂಭ. ಸರಸ ಕಥೆಗಳ ಸವಿಯನುಣ್ಣಬೇಕಾದರೆ ಓದುವುದನ್ನು ಕಲಿಯಬೇಕು ಎಂಬ ಕುತೂಹಲವು ಬಾಲಕರಲ್ಲಿ ಒಂದೊಡನೆ ಅವರಿಗೆ ಅಕ್ಷರಗಳ ಬಳಕೆ ಮಾಡಿಕೊಟ್ಟು ಓದು-ಬರೆ ಕಲಿಸುವುದು. ಆಮೇಲೆ 'ಈ ಜಗತ್ತನ್ನು ಹುಟ್ಟಿಸಿದವನು ದೇವನು' ಎಂಬ ಹಳೆಯ ಕಾಲದ ರೂಢಿಯ ಕಾಲದ ಪಾಠಕ್ಕೆ 'ಆದರೆ ಅದನ್ನು ಉಳಿಸಿದವನು, ಬೆಳೆಸುವವನು ಮನುಷ್ಯನೇ.' ಇಲ್ಲಿ ವಾಕ್ಯರಚನೆಯಲ್ಲಿನ ಬಂಧನವನ್ನು

ನೋಡಿದಾಗ ತುಂಬ ಉದ್ವೇಗದಲ್ಲಿ ಆಡುಮಾತಿನಂತೆ ಬರೆದಿರುವುದು ಗೊತ್ತಾಗುತ್ತವೆ. ಅಲ್ಲಲ್ಲಿ ವಾಕ್ಯರಚನೆ ಪೂರ್ಣವಾಗಿಲ್ಲ.

"ಇದಕ್ಕೆಯೆ 'ಸಮಾಜಪಾಠ' ಎಂಬ ಹೆಸರು ನಾರಾಯಣನ ಶಾಲೆಯಲ್ಲಿ ವ್ಯವಹಾರಕ್ಕೆ ಉಪಯುಕ್ತವಾಗುವಂತೆ ಶಿಕ್ಷಣ ಕೊಡಬೇಕು ಎಂದು ಪಂಡಿತರು ಬೊಬ್ಬೆ ಇಡುತ್ತಿರುವಾಗ 'ವ್ಯವಹಾರವನ್ನು ಕಲಿಸುವುದೆ ಶಿಕ್ಷಣ' ಎಂಬ ತತ್ವವನ್ನು ಶೋದಿಸಿದ್ದನು ನಾರಾಯಣನು ಮಾತೃಭೂಮಿಯ ನಡೆ, ಮಾತೃಭೂಮಿಯ ನುಡಿ - ಎಂಬ ಸೂತ್ರವನ್ನು ಮಾಡಿಕೊಂಡಿದ್ದನ್ನು ತನಗೊಂದು ಹಸ್ತಪ್ರತಿ ಸಿಕ್ಕಿದೆ ಎಂದಾಗ ಸಿಕ್ಕ ಶಿಕ್ಷಕರೆಲ್ಲ ನಿಮ್ಮ ಸೂತ್ರಕ್ಕೆ ಸಮರ್ಪಕವಾಗುವ ಗ್ರಂಥವೆಂದರೆ ಇದೇ ಮೊದಲನೆಯದು. ಇಂತಹದನ್ನೇ ಓದಬೇಕು ನಮ್ಮ ಶಾಲೆಯಲ್ಲಿ ಎಂದಿದ್ದರು. ನಾರಾಯಣನೆ ಕಲಿಸುವವ, ಅವನ ಆತ್ಮಚರಿತ್ರೆಯಾದ 'ವಿಶ್ವಾಮಿತ್ರಸೃಷ್ಟಿ' ಎಂಬ ಹಸ್ತಪ್ರತಿಯ ಪಠ್ಯಪುಸ್ತಕ."

ಹೀಗೆ ಲೇಖಕರು ಪರ್ಯಾಯವಾಗಿ 'ವಿಶ್ವಾಮಿತ್ರಸೃಷ್ಟಿ' ಶೀರ್ಷಿಕೆಯ ಔಚಿತ್ಯವನ್ನು ಸೂಚಿಸಿದ್ದಾರೆ. ಅಲ್ಲದೇ ವಿಶ್ವಾಮಿತ್ರಸೃಷ್ಟಿಯಲ್ಲಿನ ವಿಶ್ವಾಮಿತ್ರ ಆಧುನಿಕ ಪಾತ್ರಧಾರಿಯನ್ನು, ಪೌರಾಣಿಕ ಹಿನ್ನಲೆಯನ್ನು ಏಕಕಾಲಕ್ಕೆ ಲೇಖಕರು ನಾರಾಯಣ ಪಾತ್ರ ಸೃಷ್ಟಿಯ ಮೂಲಕ ತೋರಿಸಿದ್ದಾರೆ.

ಇಲ್ಲಿ ಲೇಖಕರು ಕಾದಂಬರಿಯ ಪ್ರಧಾನ ಆಶಯವಾಗಿ ವ್ಯಕ್ತಿಪ್ರಜ್ಞೆ ಕೇಂದ್ರಿತ ಕಥಾ ವಸ್ತುವನ್ನು ಬಳಸಿದ್ದಾರೆ. ಕಥಾವಸ್ತು ಎನ್ನುವುದಕ್ಕಿಂತ ವ್ಯಕ್ತಿಪ್ರಜ್ಞೆಯ ಹಿನ್ನೆಲೆಯಲ್ಲಿ ಬರುವ ಸನ್ನಿವೇಶಗಳನ್ನು ಒಂದೊಂದಾಗಿ ಜೋಡಣೆ ಮಾಡಿದ್ದಾರೆ. ಮೊದಲ ಘಟ್ಟವು ನಾರಾಯಣ ಪಾತ್ರವನ್ನು ಚಿತ್ರಿಸುತ್ತದೆ. ವ್ಯಕ್ತಿಪ್ರಜ್ಞೆಯ ಜಾಗೃತ ಅವಸ್ಥೆಯಾಗಿ ಹಾಗೂ ಸಮಾಜಪ್ರಜ್ಞೆ ತಾಟಸ್ಥ್ಯತೆ ಪಡೆಯುವುದು ಇಲ್ಲ ಕಂಡುಬರುತ್ತದೆ. ನಂತರದ ಘಟ್ಟ ವ್ಯಕ್ತಿಪ್ರಜ್ಞೆ ಸಾಮಾಜಿಕ ಪ್ರಜ್ಞೆಗಳ ಮುಖಾಮುಖಿಯಲ್ಲಿ ಸಮಾಜ ಪ್ರಜ್ಞೆಗಿಂತ ವ್ಯಕ್ತಿ ಪ್ರಜ್ಞೆಯೇ ಅಧಿಕ್ಯವನ್ನು ಪಡೆಯುತ್ತದೆ. ನಂತರದ ಘಟ್ಟದಲ್ಲಿ ಸಮಾಜಪ್ರಜ್ಞೆ ಮೇಲಾಗಿ ವ್ಯಕ್ತಿಪ್ರಜ್ಞೆ ಕುಸಿಯುತ್ತದೆ. ಕೊನೆಯ ಘಟ್ಟದಲ್ಲಿ ಈ ಮುಖಾಮುಖಿಯಲ್ಲಿ ಸಾಮಾಜಿಕ ಪ್ರಜ್ಞೆಯ ಪ್ರಭಾವದಿಂದಾಗಿ ವ್ಯಕ್ತಿಪ್ರಜ್ಞೆ ಯಶಸ್ಸು ಪಡೆಯುತ್ತದೆ ಹೀಗೆ ನಾಯಕನೊಬ್ಬನ ದುರ್ಬಲ (ಅಂತರ್ಮುಖಿ) ಮನಸ್ಕತೆಯಿಂದಾಗಿ ಪರಿಸರವೆಲ್ಲ ಗೋಜಲು ಗೋಜಲಾಗಿ ಕಂಡುಬಂದರು ಕೊನೆಯಲ್ಲಿ ಪ್ರಜ್ಞೆ-ಪರಿಸರ ಶಕ್ತಿಯಾಗಿ ಗೋಚರಿಸಿ ಪ್ರಜ್ಞೆ-ಪರಿಸರ ಕುರಿತ ಅಪೂರ್ವ ಸೃಜನಾತ್ಮಕ ಅನುಭವ ಇಲ್ಲಿ ಕಾಣಬರುತ್ತದೆ. ಇದು ನಿರೂಪಕರ ವೈಶಿಷ್ಟ್ಯವನ್ನು ಕಾದಂಬರಿಯ ಪಾತ್ರ ಔಚಿತ್ಯವನ್ನು ಪರ್ಯಾಯವಾಗಿ ಪ್ರಸ್ತುತಪಡಿಸುತ್ತದೆ.

## ೩.೪ ಕಾದಂಬರಿಯ ಭಾಷೆ ಮತ್ತು ಶೈಲಿ

ಯಾವುದೇ ಒಂದು ಕಾದಂಬರಿಗೆ ಭಾಷೆ-ಶೈಲಿ ತಂತ್ರಗಳು ವಸ್ತುವಿನಷ್ಟೇ ಪ್ರಮುಖ ಸಂಗತಿಗಳು. ಇವುಗಳನ್ನು ಪ್ರತ್ಯೇಕಗೊಳಿಸಿ ತೋರಿಸಲು ಸಾಧ್ಯವಿಲ್ಲ.

"ಶೈಲಿ ಎಂಬುದು ಇಂಗ್ಲೀಷಿನ style ಎಂಬುದರ ಸಂವಾದಿ ರೂಪ. ಶೈಲಿಯೆಂಬುದು ಸಿದ್ಧರೂಪವಲ್ಲ. "style means waiter's system of expressive means, inlucding a specific choice of

words phraseology syntax and other literay components" ಎಂದು ವಿಮರ್ಶಕರೊಬ್ಬರು ಶೈಲಿಯನ್ನು ವ್ಯಾಖ್ಯಾನಿಸಿದ್ದಾರೆ. ಸಾಹಿತಿಯು ತನ್ನ ಅನುಭವದ ಸಮಷ್ಟಿ ಪ್ರಜ್ಞೆಯ ರೂಪದಲ್ಲಿ ಹೊರಹಾಕುವ ಶೈಲಿ ತನ್ನಿಂದ ತಾನೇ ಅಪ್ರಯತ್ನ ಪೂರ್ವಕವಾಗಿ ರೂಪ ಪಡೆದುಕೊಳ್ಳುತ್ತದೆ." (ವಾಯ್.ಎಂ.ಭಜಂತ್ರಿ, ೨೦೦೨, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ)

ಶೈಲಿ ಪ್ರಧಾನವಾಗಿ ವ್ಯಕ್ತಿನಿಷ್ಠ ನಿಜ ಆದರೆ ಅದು ಸಮಷ್ಟಿಯ ಮೇಲೆ ಪ್ರಭಾವ ಬೀರುವುದಲ್ಲದೆ ಅದರಿಂದ ಪ್ರಭಾವಿತವಾಗುವುದೂ ಉಂಟು. ಆದ್ದರಿಂದ ಅದು ಸಾಹಿತಿಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ದರ್ಶನವೂ ಅಹುದು. ಒಂದು ಸಮಾಜದ ಸಂಸ್ಕೃತಿಯನ್ನು ಬಿಂಬಿಸುವ ದರ್ಶನವು ಅಹುದು ಅಂದರೆ ಒಬ್ಬ ಸಾಹಿತಿಯ ಶೈಲಿಯು ಅವನ ವ್ಯಕ್ತಿತ್ವವನ್ನಷ್ಟೇ ಅಲ್ಲದೇ ಆತ ಬದುಕಿದ ಸಮಾಜ ಸಂಸ್ಕೃತಿಯನ್ನು ದರ್ಶನ ಮೂಡಿಸುತ್ತದೆ. ಎಸ್.ವಿ.ರಂಗಣ್ಣ ಅವರು ಹೇಳಿದ್ದನ್ನು ಕೆ.ವಿ.ನಾರಾಯಣರು ತಮ್ಮ ಪುಸ್ತಕದಲ್ಲಿ ಈ ರೀತಿ ಹೇಳಿದ್ದಾರೆ. 'ಆಲೋಚನೆಯ ಉಡುಗೆಯೇ ಶೈಲಿ,' 'ಸುಂದರ ಕಾವ್ಯದೇವಿಯ ಮುಖ ಬಣ್ಣದ ಹೊಳಪೇ ಶೈಲಿ,' 'ಕವಿಯೇ ಶೈಲಿ' ಎಂದಿದ್ದಾರೆ. (ಕೆ.ವಿ.ನಾರಾಯಣ, ೧೯ ಪುಟ ೧೧) ಲೇಖಕರ ಭಾವನೆಗಳನ್ನು ಭಾಷೆಯ ವ್ಯಾಪ್ತಿಯಲ್ಲಿ ಕಟ್ಟಿಕೊಡುವ ಸಾಧ್ಯತೆಯನ್ನು ಶೈಲಿ ಎಂದು ಗ್ರಹಿಸಬಹುದು ಲೇಖಕನಿಗೆ ಇರಬಹುದಾದ ಅಭಿವ್ಯಕ್ತಿ ಶಕ್ತಿಯೇ ಶೈಲಿ ಇದೇ ರೀತಿ ಒಬ್ಬೊಬ್ಬ ಬರಹಗಾರರ ರೀತಿಯು ತಮ್ಮದೇ ಆದ ವೈಶಿಷ್ಟ್ಯತೆಯಿಂದ ಕೂಡಿದೆ. ಅಂತೆಯೇ ಶ್ರೀರಂಗರ ಶೈಲಿಗೂ ಅವರದೇ ಆದ ಸ್ವಂತಿಕೆ ಇದೆ. ಅದಕ್ಕಾಗಿ ಶ್ರೀರಂಗರ ಶೈಲಿ ಆಕರ್ಷಕವಾಗಿದೆ. ಸ್ವತಃ ಶ್ರೀರಂಗರೆ ತಮ್ಮ ಮಾತುಗಳ ಮೂಲಕ ಶೈಲಿಯ ಬಗ್ಗೆ ವ್ಯಕ್ತಪಡಿಸಿದ ನಿಲುವು ಈ ರೀತಿ ಇದೆ.

"ಕಾದಂಬರಿಯ ಮೊದಲನೆ ಭಾಗದಲ್ಲಿ ಅನುಸರಿಸಿದ ಶೈಲಿಯು ಕನ್ನಡಕ್ಕೆ ಹೊಸತಾದುದರಿಂದ ಓದುಗರು ಒಂದೆರಡು ಸಂಗತಿಗಳನ್ನು ಸ್ಮರಣೆಯಲ್ಲಿಟ್ಟುಕೊಂಡೇ ಓದಬೇಕಾಗುವುದು. ಮೊದಲಿನಿಂದ ಕೊನೆಯವರೆಗೆ ವಿಚಾರಾತ್ಮಕವಾದ ನಿರೂಪಣೆ ಇದೆ. ನಾರಾಯಣನೆಂಬ ವ್ಯಕ್ತಿಗೆ ಕಂಡುಬಂದಂತೆ ಸನ್ನಿವೇಶಗಳನ್ನು ಚಿತ್ರಿಸಿರುವುದರಿಂದ ನಾರಾಯಣನ ಪರವಾಗಿಯೆ ಎಂದರೆ ನಾರಾಯಣನದೊಂದು ಆತ್ಮಗತ ಭಾಷಣ ಎಂಬ ದೃಷ್ಟಿಯಿಂದಲೆ ಓದಬೇಕು. ನಾರಾಯಣನ ವಿಚಾರ ನಡೆಸಿರುವಾಗ ಅವನಿಗೆ ಸಂಬಂಧವಿಲ್ಲದ ವಸ್ತುವಿನ ಇಲ್ಲದೆ ವ್ಯಕ್ತಿಯ ನಿರೂಪಣೆ ಬಂದಲ್ಲಿ ಆ ನಿರೂಪಣೆಯನ್ನು ಸಣ್ಣಾಕ್ಷರಗಳಲ್ಲಿ ಮುದ್ರಿಸಿದೆ. ಒಂದು ಮಾತಿನಲ್ಲಿ ಹೇಳುವುದಾದರೆ ಪ್ರತಿಯೊಬ್ಬ ಓದುಗನು ತಾನೇ ನಾರಾಯಣ ಎಂದು ತಿಳಿದುಕೊಂಡು ಓದಿದರೆ ತಡೆಇಲ್ಲ. ತೊಂದರೆಯೂ ಇಲ್ಲ" ಎಂಬುದುದನ್ನು ಹೇಳಿದ್ದಾರೆ. ಈ ರೀತಿಯಾಗಿ ಹೊಸ ರೀತಿಯ ಶೈಲಿಯನ್ನು ಬಳಸುವ ಮೂಲಕ ವೈಶಿಷ್ಟ್ಯತೆಯನ್ನು ಕೃತಿಗೆ ತಂದುಕೊಟ್ಟಿದ್ದಾರೆ. ಲೇಖಕರ ವಿಭಿನ್ನ ಶೈಲಿಯನ್ನು ಕೆಲ ಅಂಶಗಳಾಗಿ ವರ್ಗೀಕರಿಸಿ ಅಧ್ಯಯನ ಮಾಡಲಾಗಿದೆ.

**ಸಂಭಾಷಣೆಯ ಸ್ವಾರಸ್ಯ :**

ಶ್ರೀರಂಗರು ತಮ್ಮ ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಸಂಭಾಷಣೆಯ ಸ್ವಾರಸ್ಯವನ್ನು ತುಂಬಾ ಚೆನ್ನಾಗಿ ಪ್ರಯೋಗಿಸಿದ್ದಾರೆ. ದೃಶ್ಯ ಮಾಧ್ಯಮವಾದ ನಾಟಕದ ಅವಿಭಾಜ್ಯ ಅಂಗವೇ ಈ ಸಂಭಾಷಣೆ ಇದು ಕಾದಂಬರಿಯಲ್ಲಿ ಕಾಣಿಸಿಕೊಂಡಾಗ ಸಹಜವಾಗಿಯೇ ಅದರಲ್ಲಿ ಜೀವಂತಿಕೆ ತುಂಬಿಕೊಳ್ಳುತ್ತದೆ. ಪಾತ್ರಗಳ ಪರಸ್ಪರ ಸಂಭಾಷಣೆ ಏರ್ಪಟ್ಟಾಗ ಕಾದಂಬರಿಕಾರನ ಸಾಮರ್ಥ್ಯಕ್ಕನುಸಾರವಾಗಿ ಅದು ಜೀವಂತಿಕೆ ಪಡೆದುಕೊಳ್ಳುತ್ತದೆ. ಇದು ಶೈಲಿಯಲ್ಲಿ ಬರುವ ಒಂದು ಮುಖ್ಯ ಅಂಗವಾಗಿದೆ. ಇದನ್ನು ಪ್ರಯೋಗ ಮಾಡಲು ಎಲ್ಲ ಕಾದಂಬರಿಕಾರರಿಗೂ ಬರುವುದಿಲ್ಲ. ಅದು ಅರಿತವರಿಗೆ ಮಾತ್ರ ಸಾಧ್ಯ. ಈ ಒಂದು ಕಲೆ ಶ್ರೀರಂಗರಿಗೆ ಇತ್ತು. ಇದನ್ನು ನಾವು ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ಪರಾಮರ್ಶಿಸಬಹುದು.

ಥರ್ಡ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿರುವ ನಾರಾಯಣನಿಗೂ ಮತ್ತು ಅಲ್ಲಿ ಪ್ರವಾಸ ಮಾಡುವ ಒಬ್ಬ ಮಹಾಶಯನಿಗೂ ಮಾತುಕತೆ ನಡೆಯಿತು "ಒಂದಿಷ್ಟು ಕಾಲು ಸರಿಸಿ" (ಪುಟ ೩) ಎಂದು ನಾರಾಯಣ ಹಟದಿಂದ ಹೆಮ್ಮೆಯಿಂದಲೇ ಹೇಳಿದ "ಸುಮ್ನೆ ಮಲಗಬಾರದೆ ಬಿಸಿಲ್ಹೊತ್ತಿನಲ್ಲಿ ಮಲಗಿದವರ್ನ ಕಾಡೋದಕಿಂತ" (ಪುಟ ೩) ಎಂದನು ಮಹಾಶಯ ಅದಕ್ಕೆ ನಾರಾಯಣ "ಮಲಗತೀನಿ ಅದಕ್ಕೆ ಕಾಲು ಸರಿಸಿರಿ ಅಂತ್ಹೇಳಿದೆ" (ಪುಟ ೩) ಎಂದನು ಆಗ ಮಹಾಶಯ "ಮಲಗಬೇಕಾದ್ರ ತಮ್ಮ ಕಣ್ಣು ತಾವು ಮುಚ್ಚಿದರಾಯ್ತು ಮಂದಿ ಯಾಕ ಕಾಲು ಸರಿಸಕೋಬೇಕು" (ಪುಟ ೩) ಎಂದನು ಈ ಒಂದು ಸಂಭಾಷಣೆಯ ನಂತರ ನಾರಾಯಣ ಎಂತಹ ಮೂರ್ಖರು ಈಜನ ಎಂದು ನಾರಾಯಣನೇ ಸುಮ್ಮನಾದನು.

ನಾರಾಯಣನು ಮದುವೆಯ ಮನೆಬಿಟ್ಟು ಹೋದಾಗ ಅವನ ತಂದೆ ತಾಯಿ ನಡುವೆ ನಡೆಯದ ಸಂಭಾಷಣೆ ಈ ರೀತಿ ಇದೆ.

"ತಾಯಿಯ ಕರುಳು! ಪಾಪ! ಮಗನಿಗೆ ಬುದ್ಧಿ ಬಂದಿದೆ. ಬಲಿತಿದೆ ಎಂಬ ಮಾತನ್ನೊಪ್ಪಬಹುದೆ? ತನ್ನ ಮಗ ಇನ್ನು ದೊಡ್ಡವನಾದ... ಅಹುದು, ಮದುವೆಯ ವಯಸ್ಸಿನವನಾದ ಎಂದರ್ಥ ಬುದ್ಧಿ ಬಂದಿದೆ ಇಲ್ಲದೆ ಬರಬೇಕಾಗಿದೆ ಎನ್ನಬಹುದೆ? ಏನೋ ಎಲ್ಲಾರ್ಹಾಂಗ ಎಂದೊ ವ್ಯಾಳ್ಯಾಕ್ಕ ಮದುವೆಯಾಗಿ ಇಷ್ಟೊತ್ತಿಗೆ ನಾಲ್ಕಾರು ಮಕ್ಕಳ ತಂದೆಯಾದರೂ ಆಗಿದ್ದರ ಅದೊಂದು ಮಾತು. ಮದಿವೆ ಆಗಿ ಇನ್ನು ಸರಿಯಾಗಿ ಇಪ್ಪತ್ತನಾಲ್ಕು ತಾಸು ಆಗಿಲ್ಲ ಮಗನಿಗೆ ಬುದ್ಧಿ ಬಾ ಅಂದರೆ ಎಲ್ಲಿಂದ ಬರಬೇಕು?

ಹೆಂಡತಿಯ ವಿಚಾರ ಸರಣಿಗೆ ಶಿನಪ್ಪನಾಯಕರು ಮತ್ತಿಷ್ಟು ಕೆರಳಿದರು. ಮಗನಿಗೆ ಬುದ್ಧಿ ಇಲ್ಲವೆಂದರೆ ಯಾವ ತಂದೆ ಕೋಪಿಸಲಿಕ್ಕಿಲ್ಲ. ಸೂರ್ಯನಿಗೆ ಬೆಳಕು ಇಲ್ಲವೆಂದರೆ? ತನ್ನ ಮಗನಿಗೆ ಬುದ್ಧಿ ಇಲ್ಲವೆಂದರೆ? ಆದರೂ ಮದುವೆಯ ಮನೆಯಿಂದೋಡಿ ಹೋದುದು ಬುದ್ಧಿವಂತಿಕೆಯ ಲಕ್ಷಣವಲ್ಲ!... ಇವಳೆ ಏನಾದರೂ ಕಲಿಸಿಕೊಟ್ಟಳೇನೊ, ಆ ಹಾಳು ಹುಡುಗನಿಗೆ!" (ಪುಟ ೪೫)

ಇಲ್ಲಿ ತಂದೆತಾಯಿಗಳ ಪಾರಂಪರಿಕ ಮೌಲ್ಯ ಆ ಮೌಲ್ಯವನ್ನು ತಮ್ಮ ಮುಂದಿನ ಪೀಳಿಗೆಯವರು ಮುಂದುವರೆಸಲೇಬೇಕೆಂಬ ಮನೋಧರ್ಮದ ಅಂಶಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಸಾಮಾನ್ಯ ಮನೆಗಳಲ್ಲೆಲ್ಲಿಯೂ ಕಾಣಬಹುದಾದ ಸಂಗತಿಯನ್ನು ಲೇಖಕರು ಚಿತ್ರಿಸಿದ ಬಗೆ ತುಂಬಾ ಮನನೀಯವೆನಿಸುತ್ತದೆ. "ಹಾದಿ ಸಾಗದಿದ್ದರೂ ಅಬ್ಬರವೆಷ್ಟು? ಮೂರ್ತಿಮತ್ತಾದ ನಮ್ಮ ಸಮಾಜದಂತಿದೆ ಈ ಗಾಡಿ ಮುಂದೆ ಪ್ರಗತಿ ಇಲ್ಲ ಇಲ್ಲದುದಕ್ಕಾಗಿ ಅಬ್ಬರ ಬೇರೆ!... ಆದರೂ ಈ ಗಾಡಿ ಕೂಡ ಸುಖ ಅಲ್ಲಿ ಅಂತ ಹೇಳಬಹುದೆ? "ನಿನ್ನಿನ ದಿವಸ ನಾನು ಕೂತು ಬಂದ ಎತ್ತಿನಗಾಡಿಗಿಂತ ಇದುವೆ ಆ ಗಾಡಿಗೆ ಹೋಲಿಸಿದರೆ ಇದು ಪುಷ್ಪಕ ವಿಮಾನ.. ಅಬ್ಬ! ಶಿವನಿಗೂ ಒಂದು ಎತ್ತು ನಂದಿವಾಹನ ಇದ್ದಿತಂತೆ ಅದಕ್ಕೆ ಸ್ಮಶಾನಕೆ ಓಡಿಹೋದನೊ ಏನೋ ಪಶುಪತಿ! ಗೋಮಾತೆ ನಮ್ಮ ಮಲತಾಯಿ ಇದ್ದಾಳೇನೊ ಅಂತೀನಿ.. ಅವಳ ಮಕ್ಕಳು ನಮ್ಮನ್ನ ಈ ಪರಿ ತೊಟ್ಟಿಲದೊಳಗೆ ಅಪ್ಪಳಿಸೋದು ಯಾಕ ಇಲ್ಲಾಂದ್ರೆ? ನಮ್ಮ ಜೀವನದ ಎಲ್ಲಾ ಸಾಧನ ಹೀಗೆ ಇದ್ದ ಮ್ಯಾಲೆ ವೈರಾಗ್ಯದ ತತ್ವಜ್ಞಾನ ದೇಶದಲ್ಲಿಯೇ ನಮ್ಮ ಸಮಾಜದಲ್ಲಿಯೆ ಹುಟ್ಟಿದೇನಾಶ್ಚರ್ಯ?" (ಪುಟ ೬) ಈ ಮಾತು ತತ್ವಜ್ಞಾನಕ್ಕೂ ಭಾರತಕ್ಕೂ ಇರುವ ಸಂಬಂಧವನ್ನು ವಿಡಂಬನಾತ್ಮಕವಾಗಿಸುವ ಶೈಲಿ ಅಲ್ಲದೇ ಶ್ರೀರಂಗರ ಪೌರಾಣಿಕ ಹಾಗೂ ತತ್ವಜ್ಞಾನದ ಆಳವಾದ ಅಧ್ಯಯನವನ್ನು ನಾವಿಲ್ಲಿ ಕಾಣಬಹುದು.

ನಾರಾಯಣ ಮತ್ತು ಹೋಟೆಲ್ ಮಾಲಿಕನ ನಡುವೆ ನಡೆದ ಸಂಭಾಷಣೆಯು ನಾರಾಯಣನು ಮೊದಲು ಕಮತೂರಿಗೆ ಬಂದು ಹೋಟೆಲೊಂದರಲ್ಲಿ ಕುಳಿತಾಗ ಪ್ರಾರಂಭವಾಯಿತು. ಅಲ್ಲಿ ನಾರಾಯಣ ಹೋಟೆಲ್ ಮಾಲೀಕನಿಗೆ "ನಾನು ಬಡವರ ಸ್ಥಿತಿಗತಿಗಳನ್ನು ನೋಡಿಕೊಳ್ಳಲಿಕ್ಕೆ ಅಂತ ಬಂದವನು" (ಪುಟ ೧೨೨) ಎಂದನು ಆಗ ಹೋಟೆಲ್ ಮಾಲೀಕ ಅವನನ್ನು ಕಂಡು ಮಾಮಲೇದಾರರ ಕೋರ್ಟಿನಿಂದ ಬಂದವರೂ ತಾವು" (ಪುಟ ೧೨೨) ಎಂದನು "ನೀವು ಹಾಗೇಕೆ ತಿಳಿದುಕೊಂಡಿರಿ" (ಪುಟ ೧೨೨) ಎಂದು ನಾರಾಯಣ ಕೇಳಿದಾಗ ಆಗ ಮಾಲೀಕನು "ಪ್ರತಿವರ್ಷ ಇದೇ ಸಮಯಕ್ಕೆ ಅಂತಹರೊಬ್ಬರು ಬರುತ್ತಾರೆ" (ಪುಟ ೧೨೨) ಆಗ ನಾರಾಯಣ ನಾನು ಅಮಲ್ದಾರನಲ್ಲ ಎಂದಾಗ ಮಾಲಿಕ ಅವನನ್ನು ನೋಡುವ ದೃಷ್ಟಿಯೇ ಬೇರೆಯಾಗುತ್ತದೆ. ಇದರಿಂದ ತಿಳಿಯುವುದೇನೆಂದರೆ ಯಾವುದೇ ಒಬ್ಬ ದೊಡ್ಡ ಅಧಿಕಾರಿ ಬಂದರೆ ಅವನ ಜೊತೆ ವ್ಯವಹರಿಸುವ ರೀತಿಗೂ ಮತ್ತು ಸಣ್ಣ ವ್ಯಕ್ತಿ ಅಥವಾ ಬಡವ್ಯಕ್ತಿ ಬಂದರೇ ಅವನಲ್ಲಿ ವ್ಯವಹಾರಿಸುವ ರೀತಿಯಲ್ಲಿ ವ್ಯತ್ಯಾಸ ಮಾಡುವುದನ್ನು ನಾವು ವಿಶ್ವಾಮಿತ್ರನ ಸೃಷ್ಟಿಯ ನಾರಾಯಣ ಮತ್ತು ಹೋಟೆಲ್ ಮಾಲೀಕರ ಪಾತ್ರಗಳ ಸಂಭಾಷಣೆಯ ಮೂಲಕ ತಿಳಿಯಬಹುದು.

ನಾರಾಯಣನು ಹೋಟೆಲ್ ಮಾಲಿಕನ ಹತ್ತಿರ ಕೆಲಸವನ್ನು ಬಿಟ್ಟ ಮೇಲೆ ಅವನು ಸಂಬಳವನ್ನು ಕೇಳಬೇಕೆಂದು ಅವನ ಹತ್ತಿರ ಬಂದಾಗ ಅದಕ್ಕೆ ಮಾಲಿಕನು ಆಡಿದ ಮಾತು ಈ ರೀತಿ ಇದೆ. "ಹೌದ್ರಿ ಸ್ವಾಮಿ ತಾವೇ ತಮ್ಮ ಇಚ್ಛಾದಿಂದ ಬಂದವ್ರು" (ಪುಟ ೧೫೫) ಎಂದನು ಅದಕ್ಕೆ ನಾರಾಯಣ "ತಾವಾಗೇ ತಮ್ಮ ಇಚ್ಛಾದಿಂದ ಬಂದರ ಸಂಬಳ ಕೊಡೋ ಹಾಗಿಲ್ಲ ಅಂತೇನು" (ಪುಟ ೧೫೧) ಎಂದು ಕೇಳಿದನು

ನಾರಾಯಣ "ಹಾಗಲ್ಲ ಸಂಬಳ ಕೊಟ್ಟು ಕೆಲಸಕ್ಕಿಟ್ಟುಬೇಕಾಗಿದ್ರೆ ಕೆಲಸ ಬರೋದೊ ಇಲ್ಲೋ ನೋಡ್ತಿವಿ ಮುಂಚೆ" (ಪುಟ ೧೫೧) ಎಂದನು ಕೊನೆಗೆ ಕೂಡಾ ಮಾಲಿಕ ಸಂಬಳ ಕೊಡಲು ತುಂಬಾ ಸತಾಯಿಸುತ್ತಾನೆ. ಇದರಿಂದ ತಿಳಿಯುವುದೇನೆಂದರೆ ಒಬ್ಬ ಮುಗ್ಧ ವ್ಯಕ್ತಿಯನ್ನು ಸಮಾಜ ಯಾವ ರೀತಿ ಮೋಸಮಾಡುತ್ತದೆ. ಅವನ ಮುಗ್ಧತೆಯನ್ನು ಯಾವ ರೀತಿ ದುರುಪಯೋಗಪಡಿಸಿಕೊಳ್ಳುತ್ತದೆ ಎನ್ನುವುದನ್ನು ಈ ಪಾತ್ರದ ಸಂಭಾಷಣೆಯ ಮೂಲಕ ತಿಳಿಯಬಹುದು.

ನಾರಾಯಣನು ಕಮತೂರಿಗೆ ಬಂದ ವಿಷಯವನ್ನು ಕುಲಕರ್ಣಿ ನಾರಾಯಣನ ತಂದೆಗೆ ತಿಳಿಸಿದ್ದ. ಆಗ ಅವನ ತಂದೆ ಮತ್ತು ಮಾವ ಕುಲಕರ್ಣಿಯ ಮನೆಗೆ ಬಂದರು. ಅವನ ತಂದೆ ಹೇಳಿದರು, "ನಿನಗೆ ಮನೀ ಕಾಳಜಿ ಇಲ್ಲಾ ಅಂದ್ರ ನಮಗೂ ಇಲ್ಲಾ ಅಂತ ತಿಳಿದೆಯೋ ಏನು" (ಪುಟ ೧೭೧) ಎಂದು ನಾರಾಯಣನಿಗೆ ಹೇಳಿದರು. ನಾರಾಯಣನು ಚಹಾದಂಗಡಿಯಲ್ಲಿ ಕೆಲಸ ಮಾಡುತ್ತಿರುವುದನ್ನು ತಿಳಿದ ನಾಯಕರು "ನಿನ್ನ ಮಗನು ಬೇಕಾದರೆ ತಡೆದುಕೊಳ್ಳಲಿ ನನ್ನ ಮೇಲೆ ಬೇಡ ಇಂತಹ ಆಟ ಎನ್ನುವಂತೆ ನುಡಿದನು ಶಿನಪ್ಪನಾಯಕ" (ಪುಟ ೧೭೧) "ಚಹಾದಂಗಡಿ ವಳಗ ಇದ್ದರೇನು ಗಟಾರ ಬಳಿದರೇನು ಎಂದು" (ಪುಟ ೧೭೧) ಹೇಳಿದಾಗ "ನಾನು ಬೇಕಾದ್ದೇಳ್ತೀನಿ ನಿನಗೆ ತಿಳೀಬೇಕೊ ತಿಳೀಬಾರ್ದೆ" (ಪುಟ ೧೭೧) ಎಂದು ನಾಯಕರು ನುಡಿದರು "ಬ್ರಾಹ್ಮಣನಾಗಿ ಹುಟ್ಟಿದ್ದಕ್ಕೆ ಅಭಿಮಾನ ಆದ್ರು ಅದನೊ ಇಲ್ಲೊ" (ಪುಟ ೧೭೧) ಎಂದು ನಾಯಕರು ನಾರಾಯಣನಿಗೆ ಹೇಳಿದರು ಈ ಒಂದು ಸಂಭಾಷಣೆಯಿಂದ ತಿಳಿಯುವುದೇನೆಂದರೆ ಪರಂಪರಾಗತ ಮನೋಧರ್ಮದಿಂದ ಮಗನನ್ನು ಕಟ್ಟಿಹಾಕುವ ಬಗೆ ತೋರಿಬರುತ್ತದೆ.

ಇಂತಹ ಹಲವಾರು ಸಂದರ್ಭಗಳ ಮೂಲಕ ಸಂಭಾಷಣೆಯ ಸ್ವಾರಸ್ಯವನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

**ಆಡುನುಡಿ ಬಳಕೆ :**

ಶ್ರೀರಂಗರು ತಮ್ಮ ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಉತ್ತರ ಕರ್ನಾಟಕದ ಗ್ರಾಮೀಣ ಮಾತನ್ನು ಬಳಸಿದ್ದಾರೆ. ಈ ಕಥೆ ಪ್ರಾರಂಭವಾಗುವುದೇ ರೈಲಿನಲ್ಲಿ ಅದರಲ್ಲಿ ಪ್ರಯಾಣಿಸುತ್ತಿರುವ ಜನ ಹಳ್ಳಿಯವರಾದ್ದರಿಂದ ಅವರು ಗ್ರಾಮೀಣ ಪ್ರದೇಶದ ಮಾತನ್ನು ಆಡುತ್ತಿದ್ದರು.

ಆ ರೈಲಿನಲ್ಲಿ ಪ್ರಯಾಣಿಸುತ್ತಿದ್ದ ಒಬ್ಬ ವ್ಯಕ್ತಿ "ಇದು ಯಾವ ಸ್ಟೇಶನರಿ" (ಪುಟ ೩) ಎಂದು ಕೇಳಿದನು. ಅಲ್ಲಿ ಪ್ರಯಾಣಿಸುತ್ತಿದ್ದ ಮುದುಕ ತನ್ನ ಮೊಮ್ಮಗನನ್ನು ಕರೆದುಕೊಂಡು ಬಂದಿದ್ದ ಟಿಕೇಟ್ ಅಧಿಕಾರಿ ಎಷ್ಟು ವರ್ಷ ಎಂದು ಕೇಳುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಅವರು ಏನು ಹೇಳಿದರು ಎಂದು ಅರ್ಥಮಾಡಿಕೊಳ್ಳದೇ "ಇಂವಗ - ಇಂವಗ - ನಾವಯ್ಯೊದಿಲ್ರಿ ಯಪಾ ನಮ್ಮದೇ ಐತಿ ಈ ಕೂಸು ನಮ್ ನಮ್ಮ ನನ್ನ ಚೊಚ್ಚಲ ಮಗನ ಬೆನ್ನಮ್ಯಾಲೆ ಹುಟ್ಟಿದ ನನ್ಮಗಳ ಮಗ ತ್ವಾಳ್ಯೊರಿಗೆ ಕೊಟ್ಟೈತಿ ಆಕೀನ" (ಪುಟ ೧೫) ಎಂದು ನುಡಿದನು. ಟಿಕೇಟ್ ತೆಗೆದುಕೋ ನಿನ್ನ ಮೊಮ್ಮಗನಿಗೆ ಎಂದಾಗ

"ಇದಕ್ಯಾಕ್ರಿ ಟಿಕೇಟಾ? ಮೊನ್ನೆ ಮೊನ್ನೆ ಗಾಂದೆಪ್ಪ ಊಟ ಬಿಟ್ಟು ಜಿಂವಾ ಬಿಡಲಿಕ್ಕೆ ನಿಂತಾಗ ಹುಟ್ಟಿದ ಕೂಸು ಇದು" (ಪುಟ ೧೫) ಎಂದು ಮುದುಕ ಹೇಳಿದನು. ಆ ರೈಲಿನಲ್ಲಿ ಹಳ್ಳಿಯ ಜನ ಎಲ್ಲೆಂದರಲ್ಲಿ ಮಲಗಿರುವುದನ್ನು ಕಂಡು ನಾರಾಯಣ ಹೇಳಿದ "ಏಳ್ರಪ್ಪಾ ಏಳ್ರಿ ಏನ ಬಿದ್ದೀರಿ ಜಾಗಾಕೊಂಡು ಮನೀ ಕಟ್ಟಿಸಿದವರ್ಹ್ಯಾಂಗ" (ಪುಟ ೩೩) ಎಂದನು. ನಾರಾಯಣನು ಕಮತೂರಿಗೆ ಬಂದ ಮೇಲೆ ಅಲ್ಲಿಯ ಜನ "ಯಾರ ಪೈಕಿರಿ ನೀವು" (ಪುಟ ೫೯) ನಾನು ಸಣ್ಣೂರಿನವ ಎಂದಾಗ "ನಾಯಕರ ಪೈಕಿ ಏನ್ರಿ" (ಪುಟ ೫೯) ಎಂದು ಕೇಳಿದರು. ನಾರಾಯಣ ಕಮತೂರಿಗೆ ಬಸ್ಸಿನಲ್ಲಿ ಹೋಗಲು ಸಿದ್ಧನಾದನು ಅಲ್ಲಿ ಹತ್ತುವಾಗ "ಲಗೂ ಲಗೂ ಹತ್ತರಿ ರಾಯರ ಇಲ್ಲಾ ಅಂದರ ಬಿಟ್ಹೋಗ್ಬೇಕಾದೀತ್ ನೋಡ್ರಿ" (ಪುಟ ೫೯) ಎಂದು ಡ್ರಾವ್ಹರ್ ಹೇಳಿದರು. ಹೀಗೆ ಇಂತಹ ಹತ್ತು ಹಲವು ಸನ್ನಿವೇಶಗಳನ್ನು ನಾವು ಗಮನಿಸಬಹುದಾಗಿದೆ.

ನಾರಾಯಣ ಕುಲಕರ್ಣಿಯ ಮನಗೆ ಊಟಕ್ಕೆ ಬಂದಾಗ ಕುಲಕರ್ಣಿ ಆಡಿದ ಮಾತುಗಳು ಹೀಗಿವೆ. "ಸ್ನಾನಮಾಡ್ತೀನಿ ಪೂಜೆ ಮುಗಿದ ಕ್ಷಣ ಊಟಕ್ಕೂಂತು ಬಿಡೋಣ ನಿಮಗೂ ಬಹಳ ಹೊತ್ತಾಗೇದ" (ಪುಟ ೯೯) ಎಂದನು "ಎಲಿ ಬಿಡಿಸ್ರಿ ಇನ್ನು ಎಂದು ಹೇಳ್ದೆ ಕೇಳಿಸ್ತೋ ಇಲ್ಲೊ" (ಪುಟ ೧೦೨) ಎಂದು ಕುಲಕರ್ಣಿ ತಮ್ಮ ಹೆಂಡತಿಗೆ ಗದರಿಸಿದರು ನಾರಾಯಣ ಹೋಟೆಲೊಂದರಲ್ಲಿ ಹೋದಾಗ "ನಿಮ್ಮಲ್ಲೇ ಕೆಲಸ ಮಾಡ್ಬೇಕಂತೀನಿ" (ಪುಟ ೧೨೮) ಎಂದನು. ನಾರಾಯಣ ನೋಕರಿ ಎಲ್ಲಿ ಸಿಗುತ್ತದೆ ಎಂದು ಅವನ ತಂದೆಗೆ ಹೇಳಿದಾಗ ಶಿನಪ್ಪನಾಯಕ "ನಿನಗ್ಯಾರು ಹೇಳಿದರು ನೌಕರಿ ಸಿಗೋದಿಲ್ಲಾಂತ" (ಪುಟ ೧೭೨) ಎಂದರು. ಕೊನೆಯ ಹಂತದಲ್ಲಿ ನಾರಾಯಣ ಯತಿ ಎಂದು ಜನರು ನಂಬಿದಾಗ ಅಲ್ಲಿಯ ಜನ ಹೇಳುತ್ತಾರೆ. "ಮಾರಿ ನೋಡಿ ಮನಸಿನಾಗ ಇದ್ದದ್ದು ಹೇಳ್ತಾರಂತ" (ಪುಟ ೨೦೭) ಎಂದರು "ಮಾಟಾ ಮಾಡಿ ಮಳೆ ತರಿಸ್ತಾರಂತ ಅವ್ರು" (ಪುಟ ೨೧೭) ಎಂದು ಕೂಡಾ ನುಡಿದರು. ಈ ರೀತಿಯ ಆಡುನುಡಿಯ ಬಳಕೆಯನ್ನು ಇವರ ಕಾದಂಬರಿಯಲ್ಲಿ ವಿಶೇಷ ರೀತಿಯಲ್ಲಿ ಬಳಸಿರುವುದನ್ನು ಕಾಣಬಹುದು.

## ಹೋಲಿಕೆಯ ಮಾತು :

ಎರಡು ವಸ್ತುಗಳ ಪರಸ್ಪರ ಸಾದೃಶ್ಯ ಸಂಪತ್ತನ್ನು ಹೇಳುವುದೇ ಹೋಲಿಕೆ. ಜನಮನದಲ್ಲಿ ನೆಲೆಸಿದ ವಸ್ತುಗಳನ್ನು ಎತ್ತಿಕೊಂಡು ಹೊಸ ಹೋಲಿಕೆ ಕೊಡುವುದು ಬಗೆಯನ್ನು ಶ್ರೀರಂಗರ ಕಾದಂಬರಿಯಲ್ಲಿ ಬಳಸಿದ್ದಾರೆ.

ನಾರಾಯಣನು ರೈಲಿನಲ್ಲಿ ಪ್ರಯಾಣಿಸುತ್ತಿರುವಾಗ ಮುಖವನ್ನು ಕಿಟಕಿಯ ಗಾಜಿನಲ್ಲಿ ಕಂಡನು ಆಗ "ತೋಯ್ದು ಇದ್ದಲಿಯ ಧೂಳಿನಂತೆ ಕಪ್ಪಾಗಿದೆ" (ಪುಟ ೩) ಎಂದನು. ಆ ರೈಲಿನಲ್ಲಿಯ ಜನರ ಅಜ್ಞಾನವನ್ನು ಕಂಡು ನಾರಾಯಣ ಹೇಳಿದ "ಕೆಟ್ಟಿದನ್ನೇ ಕೊಡುವ ಕಲಿಯುಗದ ಕಲ್ಪವೃಕ್ಷವೆ ಈ ಟ್ರೈನು" (ಪುಟ ೪) ಎಂದನು "ಕುರುಕ್ಷೇತ್ರದ ರಣಾರಂಗದ ಮೇಲೆ ಕೃಷ್ಣನಿಗೆ ಹೊಳೆದಂತೆ ಫರ್ಸ್ಟ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ನಾರಾಯಣನಿಗೆ ತಿಳಿಯಿತು" (ಪುಟ ೧೭) "ನಾರಾಯಣನಿಗೆ ತಾನು ಒಂದು ಗಾಡಿಯಂತೆ ಒಂದು ಯಂತ್ರದಂತೆ ಎನ್ನಿಸಿತು ತನಗೆ ಬುದ್ಧಿ ಇದೆ ಎಂಬುದೊಂದು ಅಭಿಮಾನದಿಂದ

ತಾನೊಂದು ಎಂಜಿನದಂತೆ ಎಂದು ಸಮಾಧಾನ ತಂದುಕೊಂಡ... ಎಂಜಿನದಂತಿದ್ದರೂ ಏನು? ಗೂಡ್ಸ್ ಟ್ರೈನು ಎಳೆಯಬಹುದು ಪ್ಯಾಸೆಂಜರ್ ಟ್ರೈನು ಎಳೆಯಬಹುದು ಮೇಲು ಟ್ರೈನು ಎಳೆಯಬಹುದು" (ಪುಟ ೧೧) ಇಲ್ಲಿ ಲೇಖಕರು ನಾರಾಯಣನನ್ನು ಎಂಜಿನಿಗೆ ಹೋಲಿಸುವುದರೊಂದಿಗೆ ಪ್ಯಾಸೆಂಜರ್ ಟ್ರೈನು, ಗೂಡ್ಸ್‌ಟ್ರೈನು, ವಿಧ, ಯಂತ್ರಿಕತೆ ಸ್ವಾತಂತ್ರ್ಯ ಹಾಗೆ ಭಿನ್ನ-ವಿಭಿನ್ನ ಆಲೋಚನಾ ಸ್ತರಗಳನ್ನು ಬೆಳೆಸಿದ ಕ್ರಮ ಕೆಲವೊಮ್ಮೆ ದಿಙ್ಮೂಢರನ್ನಾಗಿ ಮಾಡುತ್ತದೆ.

ರೈಲಿನಲ್ಲಿ ಮಾತನಾಡುವುದೆಂದರೆ "ನರಸಿಂಹ ಕಂಬ ಸೀಳಿ ಬಂದ ಹಾಗೆ" (ಪುಟ ೧೨) ಎಂದು ನಾರಾಯಣ ಹೇಳಿದ ಜನರು ಮಾತನಾಡತೊಡಗಿದರು "ಇಂಗ್ಲೀಷ್ ಜನ ಬೆಳ್ಳಗಿರೋದ್ಬಿಟ್ಟು ಕರ್‍ರಗ್ಯಾಕೆ ಎಂದಾಗ" (ಪುಟ ೧೩) ಅದಕ್ಕೆ ಹೋಲಿಕೆಯಾಗಿ "ಹತ್ತಿಯಗಿಡ ಬೆಳ್ಳಗಿರುವುದು ಬಿಟ್ಟು ಹಸಿರು ಯಾಕೆ" (ಪುಟ ೧೩) ಎಂದು ಹೇಳಿ ಅವರಿಗೆ ತಿಳಿಹೇಳಿದನು ನಾರಾಯಣ.

ರೈಲಿನಲ್ಲಿ ಟಿಕೇಟ್ ಅಧಿಕಾರಿ ಟಿಕೇಟ್ ನೋಡಲು ಬಂದಾಗ ಹಳ್ಳಿಯ ಜನ ಅವಲಕ್ಕಿಯನ್ನು ಕೊಡುವ ಸುದಾಮನಂತೆ" (ಪುಟ ೧೫) ಅವರು ಟಿಕೇಟನ್ನು ಕೊಡುತ್ತಿದ್ದರು ಅವರು ಕೇಳಲು ಬಂದಾಗ ನಾರಾಯಣನು ಹೇಳಿದ "ಹುಟ್ಟಿ ಬಂದುದಕ್ಕೆ ಜಾತಿ ಕೇಳೋದೂ ಒಂದೇ ರೈಲಿನಲ್ಲಿ ಟಿಕೇಟ್ ಕೇಳೋದು ಒಂದೇ" (ಪುಟ ೧೯) ಎಂದನು. ಆ ರೈಲಿನಲ್ಲಿ ನಾರಾಯಣ ಹಳ್ಳಿಗರ ಜೊತೆ ಮಾತನಾಡುವಾಗ ಅವನಿಗೆ ಅನ್ನಿಸಿತು "ಪರಶುರಾಮನ ಕೊಡಲಿಗೆ ಅವನ ತಾಯಿಯ ತಲೆ ತುತ್ತಾದಂತೆ ಈ ಹಳ್ಳಿಗರ ಕೊಡಲಿಗೆ ನನ್ನ ತಲೆ ತುತ್ತಾಯ್ತು" (ಪುಟ ೨೦) ಎಂದು ನುಡಿದನು ಅಲ್ಲಿ ತರುಣನೊಬ್ಬನ ಮೀಸೆಯನ್ನು ನೋಡಿ ಅದನ್ನು ಹೀಗೆ ಹೋಲಿಕೆ ಮಾಡುತ್ತಾರೆ. "ಅದೇನ ಮೀಸೆಯೊ ಎನ್‌ಒಲಿ ಮುಂದ ರೊಟ್ಟಿ ಬೆಯ್ಯೊಸೋವಾಗ ಒಡೆದ ಇದ್ದಲಿ ಬೂದಿಯೋ" (ಪುಟ ೧೩೬)

ನಾರಾಯಣನ ತಂದೆ ಮಗನನ್ನು ನೋಡಲು ಕಮತೂರಿಗೆ ಬರುವಾಗ ಏಕೆ ತಡ ಮಾಡಿದಿರಿ ಎಂದಾಗ ಮೂಹೂರ್ತ ನೋಡಿಕೊಂಡು ಬಂದಿದ್ದಕ್ಕೆ ತಡವಾಯಿತು ಎಂದರು ಅದಕ್ಕೆ ಹೋಲಿಕೆಯಾಗಿ "ಮನೆಗೆ ಬೆಂಕಿ ಹತ್ತಿದಾಗ ಬಾವಿ ತೋಡಲಿಕ್ಕೆ ಮೂಹುರ್ತ ನೋಡುವವರು ಎಂದರು" (ಪುಟ ೧೬೬) ನಾರಾಯಣ ರೈಲಿನಲ್ಲಿ ಪ್ರವಾಸ ಮಾಡುವಾಗ ಟಿಕೇಟ್ ಟಿಕೇಟ್ ಎಂದು ಅಧಿಕಾರಿ ಕೇಳಿದಾಗ ಈ ಶಬ್ದಗಳನ್ನು ಕೇಳಿದ ಮಾತ್ರಕ್ಕೆ ನಾರಾಯಣನಿಗೆ ಎಲ್ಲವೂ ಹೊಳೆಯಿತು... ಸಮರಾಂಗಣದಲ್ಲಿಯ ಸೈನಿಕರ ಸಿದ್ಧತೆ-ಸನ್ನದ್ಧತೆ-ಸಮಯ ಬದ್ಧತೆಗಳ ಕಲ್ಪನೆ ಇದೆಯೇ? ಎದುರಿನಿಂದ ಗುಂಡಿನ ಸುರಿಮಳೆಯ ಸುಂಯ್ ಗುಡುವಾಗಲೂ ದಳವಾಯಿಯು 'ಹುಷಾರ್' ಎಂದರೆ ಸೈನಿಕರೆಲ್ಲ ಸಾಲಾಗಿ ಶಾಂತರಾಗಿ ಸಾವಿಗೆ ಎದುರಾಗಿ ನಿಲ್ಲುವರಂತೆ ಹಾಗೆ 'ಟಿಕೇಟ್ ಟಿಕೇಟ್' ಎಂಬ ಶಬ್ದಗಳನ್ನು ಕೇಳಿದಾಕ್ಷಣ ಕಂಪಾರ್ಟ್‌ಮೆಂಟಿನಲ್ಲಿಯ ಮುಖಗಳೆಲ್ಲ ಸಾವನ್ನು ಎದುರಿಸುವ ಕಳೆ ತಾಳಿದ್ದುವು... ಒಂದೆಡೆ ಹರುಕು-ರುಮಾಲುಗಳ ಚುಂಗಗಳು ಭಾರತದ ಬಡತನದ ವಿಜಯ ಪತಾಕೆಗಳಂತೆ ಹೊಯ್ದಾಡುತ್ತಿದ್ದವು ಆ ಅಂಚುಗಳಿಂದ ಓಂದಿನಿಂದ ನಡೆದ ಬಂದ ಹಳಿಸಿದ ರೂಢಿಯಂತೆ ಬೆಳೆಸಿದ ತಿಪ್ಪೆಯಂತೆ ಮುರಿದು

ಮುದ್ದೆಯಾಗಿ ಮಾಸಿ ಹೊರಬೀಳುತ್ತಿದ್ದುವು ಟಿಕೇಟ್‌ಗಳು ಇನ್ನೊಂದೆಡೆ ಶಾಲೆಯ ಹುಡುಗರಂತೆ ಸಾಲಾಗಿ ನಿಂತುಕೊಂಡು ಎರಡೂ ಕೈಗಳನ್ನು ಪುರಾಣಗಳ ಎರಡೂ ಬದಿಯ ಕಿಸೆಗಳಲ್ಲಿ ಸಿಕ್ಕಿಸಿಕೊಂಡು ಹಿಂದೂಸ್ತಾನದ ಹಣೆಬರದಂತೆ ಶೂನ್ಯ ದೃಷ್ಟಿಯಿಂದ ನಿಂತಿದ್ದರು ಕೆಲವರು : ಆ ಕಿಸೆಗಳಿಂದ ಹುದುಗಿಟ್ಟ ನಿಧಿಯಂತೆ ಬಿಗಿದಿಟ್ಟ ಜೀವನದಂತೆ ರೂಪುಗೆಟ್ಟ ಸತ್ವಗೆಟ್ಟ ಟಿಕೇಟ್‌ಗಳು ತಲೆಯೆತ್ತುತ್ತಿದ್ದವು ಒಂದು ಬದಿ ಇನ್ನೊಂದು ಬದಿ ಜೀವನವೆಲ್ಲ ಪ್ರಪಂಚವೆಲ್ಲ ಹುರುಳಿಲ್ಲದುದೆಂದು ತಿಳಿಸಿ ಹೇಳುವಂತೆ ತೂತುಗಳಿಂದ. ಹಣಿಕ್ಕಿಕ್ಕುತ್ತಿದ್ದವು ಕೈಬೆರಳುಗಳು" (ಪುಟ ೧೪)

## ಗಾದೆ ಮಾತು :

ಶ್ರೀರಂಗರು ತಮ್ಮ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ಸಂದರ್ಭಕ್ಕೆ ತಕ್ಕಂತೆ ಕೆಲ ರೂಢಿಗತ ಗಾದೆಮಾತನ್ನು ಬಳಸಿರುವುದನ್ನು ಕಾಣಬಹುದು. ಅಂತಹ ಕಲ ಸಂದರ್ಭಗಳನ್ನು ಇಲ್ಲಿ ಉಲ್ಲೇಕಿಸಲಾಗಿದೆ.

ನಾರಾಯಣ ಒಂದು ಸಂದರ್ಭದಲ್ಲಿ ಹೇಳಿದ "ಯಾತಕ್ಕ ಭಾರ ತಲೆಗೂ ಭಾರ" ಎನ್ನುವ ಹಾಗೆ ಓದಬಾರದು ಎಂದು ಹೇಳಿದನು. ನಾರಾಯಣನು ಬಸ್ಸಿನಲ್ಲಿ ಪ್ರಯಾಣಿಸುವ ಸಂದರ್ಭದಲ್ಲಿ ಟಿಕೇಟ್ ತೆಗೆದುಕೊಳ್ಳಲು ಕಾಸು ಕಡಿಮೆ ಇದ್ದಾಗ ಅಲ್ಲಿಯ ಕಂಡೆಕ್ಟರ್ ಹೇಳಿದ "ಕಾಸು ಕೊಡದೆ ಕಾಶೀಯಾತ್ರೆ ಮಾಡ್ಬೇಕಂತಿಯೇನು" (ಪುಟ ೫೦) ಎನ್ನುತ್ತಾನೆ. ಹಳ್ಳಿಯ ಜನ ತುಂಬಾ ಅಜ್ಞಾನಿಗಳಾಗಿರುವುದಲ್ಲದೆ ಮೂಢನಂಬಿಕೆಯನ್ನು ಕೂಡಾ ನಂಬುವ ಜನ. "ಬೆಕ್ಕು ಅಡ್ಡ ಹಾಯ್ದರೆ ಕಾರ್ಯಸಿದ್ದಿಯಾಗುವುಧಿಲ್ಲ" ಎಂಬ ಮಾತು ಇದಕ್ಕೆ ಪೂರಕವಾಗಿದೆ. ಇನ್ನೊಂದು ಸಂದರ್ಭದಲ್ಲಿ ಹಿಂದಿನ ಸಲ ಯಾವ ರೀತಿ ತೀರ್ಪು ಕೊಟ್ಟಿದ್ದರೋ ಅದೇ ರೀತಿ ತೀರ್ಪುಕೊಡಿ ಎಂದು ಮಲ್ಲಣ್ಣ ಕುಲಕರ್ಣಿಗೆ ಹೇಳಿದಾಗ ಕುಲಕರ್ಣಿ ಆ ಸಂದರ್ಭದಲ್ಲಿ ಬಳಸಿದ ಗಾದೆ ಈ ರೀತಿ ಇದೆ. "ಹ್ಯಾದ ಹೊತ್ತು ತಿಂದ ತುತ್ತು ಬಾ ಅಂದರ ಹ್ಯಾಂಗ ಬಂದಿತು" (ಪುಟ ೭೪) ನಾರಾಯಣ ನಾನು ಹಿಂದೂ ಧರ್ಮದಲ್ಲಿ ಹುಟ್ಟಿದುದಕ್ಕೆ ಈ "ಪಾಲಿಗೆ ಬಂದದ್ದು ಪಂಚಾಮೃತ" ಎಂಬುದು ಜನ್ಮತ: ಗುಣ ಎಂದು ಹೇಲುತ್ತಾನೆ.

ನಾರಾಯಣನು ಕುಲಕರ್ಣಿಯ ಮನೆಗೆ ಊಟಕ್ಕೆ ಬಂದಾಗ ಸ್ನಾನ ಮಾಡಿರಿ ಎಂದು ಕುಲಕರ್ಣಿ ಹೇಳಿದಾಗ ನಾರಾಯಣ ನಾನು ಸ್ನಾನ ಮಾಡಿದ್ದೇನೆ ಎಂದು ನಾರಾಯಣ ಸುಳ್ಳು ನುಡಿದ ಆಗ ಕುಲಕರ್ಣಿ ನಕ್ಕು ಈ ಹೇಳುತ್ತಾನೆ. "ಸಾವಿರ ಸುಳ್ಳು ಹೇಳಿ ಒಂದು ಕಲ್ಯಾಣ ಕಟ್ಟಬೇಕು" (ಪುಟ ೯೫) ಶಿನಪ್ಪನಾಯಕ ಮಗನ ಮನಸ್ಸಿನಲ್ಲಿ ಏನಿದೆ ಎಂದು ತಿಳಿಯಲು ಮಾತುಕತೆ ನಡೆದ ಸಂದರ್ಭದಲ್ಲಿ ಈ ರೀತಿ ಹೇಳುತ್ತಾರೆ. "ಬೊಟ್ಟು ತಿವಿದು ಪೆಟ್ಟು ತಾಕಿತೆ" (ಪುಟ ೧೭೮) ನಾರಾಯಣ ಯತಿ ಎಂದು ಊರ ಜನರಲ್ಲಿ ನಂಬಿದಾಗ ೨ ವರ್ಷಕ್ಕೊಮ್ಮೆ ಪಿಡುಗು ಬರಗಾಲ ಬರುತ್ತದೆ ಎಂದಾಗ ಹಳ್ಳಿಯ ಜನ ಈ ಗಾದೆ ಬಳಸಿದರು "ದುಡ್ಡಿದ್ದವ್ರು ಊರ ಬಿಟ್ಟರ್‍ರಿ, ದುಡ್ಡಿಲ್ಲವ್ರು ಜಿಂವಾ ಬಿಟ್ಟರ್‍ರಿ" (ಪುಟ ೨೨೬) "ಸಂಕಟ ಬಂದಾಗ ವೆಂಕಟರಮಣ" (ಪುಟ ೩೮) ಎಂಬುದನ್ನು ಬಳಸಿದ್ದಾರೆ.

ಹೀಗೆ ಸಾಂದರ್ಭಿಕ ಅಗತ್ಯತೆಯ ಹಿನ್ನಲೆಯಲ್ಲಿ ಹಲವಾರು ಗಾದೆಮಾತುಗಳನ್ನು ಬಳಸಿರುವುದು ಕಾದಂಬರಿಯುದ್ದಕ್ಕೂ ಕಂಡುಬರುತ್ತದೆ. ಇಲ್ಲಿ ಬಳಸಲಾದ ಗಾದೆ ಮಾತು ದಿನನಿತ್ಯದ ರೂಢಿಗತ ಮಾತಾದುದರ ಔಚಿತ್ಯವನ್ನು, ಸ್ವಭಾವ ಜನ್ಯ ಮನಸ್ಥಿತಿಯಾಗಿರುವುದನ್ನು ಗುರುತಿಸಬಹುದಾಗಿದೆ.

**ಪದ್ಯದ ಬಳಕೆ :**

ಶ್ರೀರಂಗರು ರೂಡಿಗತವಾದ ಕೆಲವು ಪದ್ಯಗಳನ್ನು ಕೂಡಾ ಬಳಸಿದ್ದಾರೆ. ಇದು ಶ್ರೀರಂಗರ ಹೊಸ ಶೈಲಿ ಎನ್ನಬಹುದು. ಅವು ಈ ಕೆಳಗಿನಂತಿವೆ.

"ಮಧುಕರ ವೃತ್ತಿ ಎನ್ನದು| ಅದು ಬಲು ಚೆನ್ನದು ||ಪಲ್ಲ||

ಪದುಮನಾಭನ ಪಾದ| ಪದುಮ ಮಧುಪವೆಂಬ" ||ಅನುಪಲ್ಲಿ|| (ಪುಟ ೯೨)

"ಸಾಲೆಯ ಕಲಿತಿಟ್ಟೆ ಕಾಲೇಜ ಡಿಗ್ರಿ ಕಟ್ಟಿ|

ಹಾಳಾದೆ ನಿನಗಿನ್ನು| ಕೂಳಿಗೆ ಗತಿ-ಇಲ್ಲ||

ಮಧುಕರ ವೃತ್ತಿ" (ಪುಟ ೯೨)

"ಮಧುಕರ ವೃತಿ ಎಮ್ಮದು| ಅದು ಬಲು ಚೆನ್ನದು ||ಪ||

ಪದುಮನಾಭಾನ ಪಾದ| ಪದುಮ ಮಧುಪವೆಂಬ ||ಅನು|| (ಪುಟ ೯೨)

"ಊಟ ಮಾಡಿದ ಮೇಲೆ ಕೂಟದ ಚಿತ್ತಿಲ್ಲ|

ಕೊಟ್ಟರೆ ವೀಳ್ಯವನೊಲ್ಲನೆಂಬುವನೆ||

ಧಾಟಿಯು ತೋರುತ ಶಿಷ್ಯ ಜನರಿಗೆ|

ಪಾಠವ ಹೇಳುತ ಕುಳಿತಿಹನಮ್ಮಾ"|| (ಪುಟ ೯೪)

"ವಿಸ್ತರಿಸಿ ಮೃಷ್ಟಾಭೋಜನದ ನವಕುಸುಮ ಫಲ

ವಸ್ತುಗಳ ಕರ್ಪೂರ ವೀಟಕೆಯ ಚಂದನದ

ಕಸ್ತೂರಿ ಜವಾದಿಗಳ ಪರಿಮಳದ ಕರ್ದಮದ ವಸ್ತಭೂಷಣ ವಿತ್ತದಾ"| (ಪುಟ ೧೦೭)

**ಪ್ರಾದೇಶಿಕ ಶಬ್ದ ಬಳಕೆ :**

ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ಪ್ರಾದೇಶಿಕ ಮಟ್ಟದ ಹಲ-ಕೆಲವು ವಿಚಾರಗಳನ್ನು ಶಬ್ದಗಳನ್ನು ಬಳಸಿದ್ದಾರೆ. ಅದರಲ್ಲೂ ಉತ್ತರ ಕರ್ನಾಟಕದ ಸಮಗ್ರ ಭಾಷಾಶೈಲಿ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಅಂತಹ ಒಂದು ಸಂದರ್ಭ ಇಲ್ಲಿದೆ. ತನ್ನ ನಾಯಕನ ಹೆಸರು ನರಸು ಎಂದ

ಮಾತ್ರಕ್ಕೆ ಅದೇಕೊ ನಾರಾಯಣನ ಆದರೆ ಬುದ್ಧಿ ಅರ್ಥದಷ್ಟು ಇಳಿಯಿತು ಮಠದ ಮಡಿಯನ್ನು ಮಾನವನ್ನು ನೋಡಿ ಲೆಣಿಸ ಹೋದಾಗ 'ಮುಂಡೆನ್ನೆದಬ್ಬೆ' ಎಂಬ ಶಬ್ದಗಳು ಕಿವಿಗೆ ಚುಚ್ಚಿದರೆ ಎಷ್ಟು ನಿರಾಶೆ, ಎಂತಹ ತಿರಸ್ಕಾರ ಹುಟ್ಟುವವೊ ಅಷ್ಟು ನಿರಾಶೆ, ಅಂತಹ ತಿರಾಸ್ಕಾರ ನಾರಾಯಣನಿಗೆ... ತನ್ನ ನಾಯಕನು ನರಸು ಆದನಲ್ಲ" ಎಂದು (ಪುಟ ೩೩) ಇಲ್ಲಿ ಉತ್ತರ ಕರ್ನಾಟದ ಸಾಮಾನ್ಯ ಬೈಗುಳಿವನ್ನು ಕಾಣಬಹುದಾಗಿದೆ.

ಇಲ್ಲಿ ಬಳಸಲಾದ ಬೈಗುಳ ಉತ್ತರ ಕರ್ನಾಟಕ ಜನ-ಮನಗಳ ಭಾಷೆಯಾಗಿದೆ ಆ ಬೈಗುಗಳವನ್ನು ಮಠದ ಸಂದರ್ಭ ಬಂದಾಗ ಬಳಸಿರುವ ಔಚಿತ್ಯವನ್ನು ಕೂಡ ನಾವು ಗಮನಿಸಬಹುದಾಗಿದೆ. ಅಲ್ಲದೇ ನಾರಾಯಣ ಗಾಡಿಯಿಂದ ಕೆಳಗೆ ಬಿದ್ದಾಗ "ಅವ್ವಾ-ಸತ್ತೇನರೆ" ಎಂಬ ಮಾತು ಲೇಖಕರೇ ಅಲ್ಲಲ್ಲಿ ಬಳಸಿರುವಂತೆ ಧಡಧಡಿತ ಬಂದಿದೆ ಎಂಬುದು ಗಮನೀಯ ಅಂಶ.

"ಹ್ಯಾಲಾ ಕಿತೀ ಚೀವ ಅಯ್?" ಹ್ಯಾತಿ ಟಿಕೇಟು ಇವುಗಳಿಂದ ಅಧಿಕಾರಿಯ ಮರಾಠಿ ಪ್ರಾಂತ್ಯದ ಪ್ರಭಾವವನ್ನು ಕಾಣಬಹುದಾಗಿದೆ. "ಚಲೋ-ತುಮ್ ಭಾರ್ ಚಲೋ" (ಪುಟ ೧೫)

**ತಂತ್ರ :**

ಒಂದು ಕೃತಿಯ ವಸ್ತು ವಿಶ್ಲೇಷಣೆ ಅದರ ತಂತ್ರದ ವಿಶ್ಲೇಷಣೆಯೇ ಆಗಬೇಕಾಗುತ್ತದೆ. ಶೋರರ್ ಇದಕ್ಕೂ ಮುಂದೆ ಹೋಗಿ "ವಸ್ತು ಮತ್ತು ತಂತ್ರ ಎರಡೂ ಒಂದೇ ಎಂಬ ಅಭಿಪ್ರಾಯಕ್ಕೆ ಬರುತ್ತಾನೆ" (ಗಿರಡ್ಡಿ ಗೋವಿಂದರಾಜ, ೧೯, ಪುಟ ೧೦)

ತಂತ್ರದ ಬಗ್ಗೆ ಎಲ್.ಎಸ್.ಶೇಷಗಿರಿರಾವ್ ಅವರು ಹೀಗೆ ಹೇಳಿದ್ದಾರೆ 'ನಿಜವಾಗಿ ಒಂದು ಸಾಹಿತ್ಯ ಕೃತಿಯನ್ನು ಓದುವುದು ಎಂದರೆ ಒಂದು ಬಗೆಯ ಪ್ರಯಾಣ ಈ ಪ್ರಯಾಣದಲ್ಲಿ ಒಂದು ನಿಯಂತ್ರಣವಿದೆ ಈ ನಿಯಂತ್ರಣವೇ ಅದರ ತಂತ್ರ. ಕವಿ ತನ್ನ ಜೀವನನುಭವವನ್ನು ಓದುಗನಿಗೆ ಸಂವಹನಗೊಳಿಸಲು ಅನುಭವವನ್ನು ವ್ಯವಸ್ಥಿತಗೊಳಿಸುವ ವಿಧಾನವೇ ಕೃತಿಯ ತಂತ್ರ ಯಶಸ್ವಿಯಾದ ಸಾಹಿತ್ಯ ಕೃತಿಯಲ್ಲಿ ತಂತ್ರ ಕೃತಿಯಲ್ಲಿನ ಅನುಭವಕ್ಕೆ ಶರೀರ ನೀಡುವ ಪ್ರಯತ್ನ ಮಾಡುತ್ತದೆ'' ಈ ವಿಧಾನ ಗಮನಾರ್ಹವಾಗಿದೆ. (ಎಲ್.ಎಸ್.ಶೇಷಗಿರಿರಾವ್, ೧೯, ಪುಟ ೧೨೫)

ತಂತ್ರ ಎನ್ನುವುದು ಎಲ್ಲ ಅಂಶಗಳಂತೆ ಇದೂ ಒಂದು ಕೃತಿಯೊಂದರಲ್ಲಿ ತನಗೆ ತಾನೇ ಸ್ವಾತಂತ್ರ್ಯವಾದುದಲ್ಲ ಈ ಹಿನ್ನೆಲೆಯಲ್ಲಿ ಹೆನ್ರಿಜೇಮ್ಸ್ ಹೇಳುವ ಮಾತು ಔಚಿತ್ಯಪೂರ್ಣವಾಗಿದೆ 'ತಂತ್ರವೇ ವಸ್ತುವಿನ ತಿರುಳು'

ಪ್ರಸ್ತುತ ಈ ಕಾದಂಬರಿಯುದ್ದಕ್ಕೂ ಶ್ರೀರಂಗರು ಪ್ರಜ್ಞಾಪ್ರವಾಹ ತಂತ್ರವನ್ನು ಬಳಸಿದ್ದಾರೆ. ಈ ತಂತ್ರವನ್ನು ಅಂತರ್ಭಾವ ಮುದ್ರವಾದ ಎಂದು ಕೂಡಾ ಕರೆಯುವುದುಂಟು. "ಈ ಪ್ರಜ್ಞಾಪ್ರವಾಹ ತಂತ್ರ.

ಪದವನ್ನು ಮೊದಲ ಬಾರಿಗೆ ಬಳಸಿದವನು ವಿಲಿಯಮ್ ಜೇಮ್ಸ್, ಎಂಬ ಮನೋವಿಜ್ಞಾನಿ ಅವನ ಪ್ರಕಾರ ಪ್ರಜ್ಞೆ ವ್ಯಕ್ತಿಯ ಅಂತರಂಗಕ್ಕೆ ಸಂಬಂಧಿಸಿದ್ದು" (ಸಿ.ಆರ್.ಯರವಿನತೆಲಿಮಠ, ೨೦೦೦, ಪುಟ ೧೨೫)

"ಪ್ರಜ್ಞಾಪ್ರವಾಹ ಕಾದಂಬರಿ ಸಂಪೂರ್ಣ ಅಂತರ್ಮುಖಿಯಾಗಿದ್ದು ಅಸ್ಥಿರ ಅಸಮತೋಲನ ಸ್ಥಿತಿಯಲ್ಲಿರುವ ಪ್ರವಾಹಿ ರೂಪದ ವ್ಯಕ್ತಿತ್ವವನ್ನು ಚಿತ್ರಿಸಲು ಯತ್ನಿಸುತ್ತದೆ. ಮನಸ್ಸಿನ ಪ್ರಕ್ರಿಯೆಗಳ ಮೂಲಕವಾಗಿಯೇ ಪಾತ್ರದ ಸಾಧ್ಯತೆಗಳನ್ನು ಸೂಚಿಸುವ ಪ್ರಯತ್ನವಾಗಿರುತ್ತದೆ. ಹೀಗಾಗಿ ಪ್ರಜ್ಞಾಪ್ರವಾಹ ಕಾದಂಬರಿಯು ಘಟನೆಗಳಿಗಿಂತ ಗ್ರಹಿಕೆಗೆ ಕ್ರಿಯೆಗಿಂತ ಆಲೋಚನೆಯ ಲಹರಿಗಳಿಗೆ, ಸಂವೇದನೆಗಳಿಗೆ, ಸನ್ನಿವೇಶ ನಿರ್ಮಾಣಕ್ಕಿಂತ ಮನೋಲೋಕದ ಭ್ರಾಮಕ ಕಲ್ಪನೆಗಳು ಮತ್ತು ಹಗಲುಗನಸುಗಳಿಗೆ ಪ್ರಮುಖ್ಯತೆ ನೀಡುತ್ತದೆ. ಸಾಮಾಜಿಕವಾಗಿ ಅಂಗೀಕೃತವಾದ ವ್ಯಕ್ತಿಯ ವರ್ತನೆಗಳಿಗಿಂತ ನಿಷ್ಠುರ ಆತ್ಮವಿಶ್ಲೇಷಣೆಗೆ, ಭಾವನೆ ಸಂವೇದನೆಗಳ ಪ್ರಾಮಾಣಿಕ ಅಭಿವ್ಯಕ್ತಿಗೆ ಗಮನ ನೀಡುತ್ತದೆ. ಅನುಭವಗಳ ಅಂತರ್ಮುಖತೆ ಹೆನ್ರಿ ಜೇಮ್ಸ್ ಮಾತಿನಲ್ಲಿ ಹೇಳುವುದಾದರೆ 'ಮನಸ್ಸಿನ ವಾತಾವರಣ' ಕಾದಂಬರಿಯ ವಸ್ತುವಾಗುತ್ತದೆ." (ಸಿ.ಆರ್.ಯರವಿನತೆಲಿಮಠ, ೨೦೦೦, ಪುಟ ೧೨೬)

"ಪ್ರಜ್ಞಾಪ್ರವಾಹ ತಂತ್ರದ ಬಳಕೆ ಕೆಲವು ಕಾದಂಬರಿಗಳಲ್ಲಾಗಿದ್ದರೂ, ಅದನ್ನು ಸಂಪೂರ್ಣ ಪ್ರಜ್ಞಾ ಪ್ರವಾಹ ಕಾದಂಬರಿಗಳೆಂದು ಕರೆಯಲಿಕ್ಕಾಗದು. ಸೀಮಿತ ಅರ್ಥದಲ್ಲಿ ಮಾತ್ರ ಅವು ಪ್ರಜ್ಞಾ ಪ್ರವಾಹ ಕಾದಂಬರಿಗಳಾಗಿರುತ್ತವೆ. ಆದರೆ ಈ ಪ್ರಜ್ಞಾ ಪ್ರವಾಹ ತಂತ್ರದ ಬಳಕೆ ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿಯಲ್ಲಿ ಬಳಸಿರುವುದು ಗಮನಾರ್ಹ ಪ್ರಯೋಗವೆನ್ನಬಹುದು." (ಸಿ.ಆರ್.ಯರವಿನತೆಲಿಮಠ, ೨೦೦೦, ಪುಟ ೧೨೮) ಕನ್ನಡದಲ್ಲಿ ಪ್ರಜ್ಞಾ ಪ್ರವಾಹ ತಂತ್ರವನ್ನು ಬಳಸಿದವರಲ್ಲಿ ಮೊದಲಿಗರೆಂದರೆ ಶ್ರೀರಂಗರು. ಇವರು ತಮ್ಮ ಎಲ್ಲ ಕಾದಂಬರಿಯಲ್ಲಿಯೂ ಪ್ರಜ್ಞಾ ಪ್ರವಾಹ ತಂತ್ರವನ್ನು ಬಳಸಿದರು ಕೂಡಾ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ಅದರ ಬಳಕೆ ವಿಶಿಷ್ಟ ರೀತಿಯದಾಗಿರುತ್ತದೆ.

ನಾರಾಯಣ ಕಾಲೇಜು ಮುಗಿಸಿದ ಒಬ್ಬ ಶಿಕ್ಷಿತ ಯುವಕ ಅವನು ಸಮಾಜ ಸುಧಾರಣೆ ಮಾಡಬೇಕೆಂಬ ಹಟ. ಮದುವೆಯ ಮನೆ ಬಿಟ್ಟು ರೈಲಿನಲ್ಲಿ ಹೊರಟಿದ್ದಾನೆ. ಅವನದು ವಿಚಿತ್ರ ಮನಸ್ಥಿತಿ. ಗೊಂದಲಮಯವಾದ ವ್ಯಕ್ತಿತ್ವ. ಈ ಗೊಂದಲಮಯ ಮನಸ್ಸಿನ ಸಂಶ್ಲೇಷಣೆಯನ್ನು ಚಿತ್ರಣದಲ್ಲಿ ಶ್ರೀರಂಗರು ಪ್ರಜ್ಞಾ ಪ್ರವಾಹ ತಂತ್ರವನ್ನು ಬಳಸಿದ್ದಾರೆ.

ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ಪ್ರಜ್ಞಾ ಪ್ರವಾಹ ತಂತ್ರವನ್ನು ಎಲ್ಲೆಲ್ಲಿ ಬಳಸಿದ್ದಾರೆ ಎನ್ನುವುದನ್ನು ಈ ಕೆಳಗೆ ತಿಳಿಯಬಹುದು.

ವರ್ತಮಾನದಲ್ಲಿ ನಾರಾಯಣ ಟ್ರೇನಿನ ಕಂಪಾರ್ಟ್‌ಮೆಂಟಿನ ಮೂಲೆಯಲ್ಲಿ ನರಳುತ್ತ ಬಿದ್ದಿರುವ ಮುದುಕನನ್ನು ನೋಡುತ್ತಾನೆ. ಆ ಮುದುಕ ನರಳುತ್ತಿರುವುದು ಇಡೀ ಸಮಾಜಕ್ಕೆ ಕೇಳಿಸುತ್ತದೆ. ಕೂಡಲೆ

ನಾರಾಯಣನ ಮನಸ್ಸು ವರ್ತಮಾನದಿಂದ ಭೂತಕಾಲದ ಒಂದು ಘಟನೆಗೆ ತಿರುಗುತ್ತದೆ. ಅದು ಅವನ ಮದುವೆ ಸಂದರ್ಭ ನಡೆಯದೇ ಹೋದ ಮದುವೆಯ ನೆನಪು ಅವನನ್ನು ಚುಚ್ಚುತ್ತದೆ. ಭೂತದಿಂದ ಪುನಃ ವರ್ತಮಾನಕ್ಕೆ ಅಂದರೆ ತಾನು ಕುಳಿತಿದ್ದ ಸ್ಥಳಕ್ಕೆ ಬರುತ್ತದೆ. ಹೀಗೆ ನಾರಾಯಣನ ಮನಸ್ಸು ವರ್ತಮಾನದಿಂದ ಭೂತಕ್ಕೆ ಭೂತದಿಂದ ವರ್ತಮಾನಕ್ಕೆ ಹರಿದಾಡುತ್ತಿರುತ್ತದೆ.

ಪ್ರಜ್ಞಾ ಪ್ರವಾಹ ತಂತ್ರವನ್ನು ಬಳಸಿರುವ ಮತ್ತೊಂದು ಸಂದರ್ಭವನ್ನು ಕಾಣಬಹುದು. ಅದೇ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದ ನಾರಾಯಣನು ಅಲ್ಲಿಗೆ ಬಂದ ಒಬ್ಬ ದಾಷ್ಟ್ಯ ವ್ಯಕ್ತಿ ಕಂಡನು. ಅವನನ್ನು ಕಂಡು ಹೆದರುವ ಜನರನ್ನು ಕಂಡು ಜನರು ಇಂತಹ ದಷ್ಟ ಮುಷ್ಟ ವ್ಯಕ್ತಿಯನ್ನು ಕಂಡರೆ ಮಾತ್ರ ಜನ ಹೆದರುತ್ತಾರಲ್ಲ ಎಂದು ತಿಳಿದು ನಾನು ಒಂದು ವ್ಯಾಯಾಮ ಶಾಲೆಯನ್ನು ಸ್ಥಾಪಿಸಿ ಜನರನ್ನು ದಾಷ್ಟರನ್ನಾಗಿ ಮಾಡಬೇಕೆಂದು ಅವನು ಇದನ್ನೆಲ್ಲ ವರ್ತಮಾನದಲ್ಲಿಯೇ ಕುಳಿತು ಭವಿಷತ್ ಕಾಲದಲ್ಲಿ ಯೋಚನೆ ಮಾಡುತ್ತಾನೆ. ಆ ಕೆಲಸ ಮಾಡುತ್ತಿದ್ದೇನೋ ಎಂದು ಅವನು ಯೋಚಿಸುತ್ತಿದ್ದನು. ಹೀಗೆ ನಾರಾಯಣನ ಮನಸ್ಸು ಭವಿಷತ್‌ದಿಂದ ವರ್ತಮಾನಕ್ಕೆ ವರ್ತಮಾನದಿಂದ ಭವಿಷತ್ ಕಾಲಕ್ಕೆ ತಿರುಗುವಷ್ಟು ಸುಲಭವಾಗಿತ್ತು.

ರೈಲಿನಲ್ಲಿ ಹಳ್ಳಿಯ ಜನರ ಅಜ್ಞಾನ ಎಷ್ಟರ ಮಟ್ಟಗೆಂದರೆ ಅವರಿಗೆ ಟಿಕೇಟನ್ನು ತೆಗೆದುಕೊಳ್ಳುವುದು ಕೂಡಾ ಗೊತ್ತಿರದಷ್ಟು ಅಜ್ಞಾನಿಗಳು. ಅದನ್ನು ನೋಡುತ್ತಾ ಕುಳಿತುಕೊಂಡಲ್ಲಿಯೇ ಒಂದು ಯೋಚನೆ ಹಾಕುತ್ತಾನೆ. ಅವರಿಗೆ ಶಿಕ್ಷೆಯ ನೆಪದಲ್ಲಿ ೬ ತಿಂಗಳುಗಳ ಕಾಲ ಶಿಕ್ಷಣ ಕೊಡುವುದು.

ಈ ರೀತಿಯ ಅನೇಕ ಸಂದರ್ಭಗಳಲ್ಲಿ ನಾವು ಪ್ರಜ್ಞಾ ಪ್ರವಾಹ ತಂತ್ರವನ್ನು ಬಳಸಿರುವುದು ಕಾಣಬಹುದು. ಈ ಎಲ್ಲ ಸಂದರ್ಭಗಳು ಘಟನೆಗಿಂತ ಗ್ರಹಿಕೆಗೆ, ಕ್ರಿಯೆಗಿಂತ ಆಲೋಚನೆಯ ಲಹರಿಗಳಿಗೆ, ಸಂವೇದನೆಗಳಿಗೆ, ಸನ್ನಿವೇಶ ನಿರ್ಮಾಣಕ್ಕಿಂತ ಮನೋಲೋಕನ ಭ್ರಾಮಕ ಕಲ್ಪನೆಗಳು ಮತ್ತು ಹಗಲುಗನಸುಗಳಿಗೆ ಪ್ರಾಮುಖ್ಯತೆ ನೀಡುತ್ತದೆ ಎಂಬ ವ್ಯಾಖ್ಯೆಗೆ ಅನುಗುಣವಾಗಿರುವುದನ್ನು ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ "ನಾಯಕನ ಇಲ್ಲವೆ ಅವನ ಪ್ರಜ್ಞೆಯ ಮೂಲಕ ಇತರ ಪಾತ್ರಗಳ ಭಾವ ಬಂಧಗಳನ್ನು ಮಾನಸಿಕ ತೊಡಕು ತೊಂದರೆಗಳನ್ನು ಅಪರಿಚಿತ ಜಗತ್ತಿನ ಶೋಧನೆಯನ್ನು ವರದಿ ಮಾಡುವುದಾಗಲೀ ಪ್ರಥಃಕ್ಕರಿಸಿ ನೋಡುವುದಾಗಲೀ ಶ್ರೀರಂಗರ ಉದ್ದೇಶವಲ್ಲ. ಭೂತದ ಅರ್ಥ ವಿವರಣೆಗಾಗಿ ವರ್ತಮಾನವನ್ನು ಬಳಸುವುದಿಲ್ಲ. ವರ್ತಮಾನದಲ್ಲಿ ಗತಕಾಲದ ಅವಶೇಷಗಳನ್ನು ಗುರುತಿಸುವುದಿಲ್ಲ. ಆ ಕಾಲದಲ್ಲಿ ಇಂಥ ಸಂಕೀರ್ಣ ಉದ್ದೇಶಗಳ ಅಭಿವ್ಯಕ್ತಿಗೆ ತಕ್ಕುದಾದ ಭಾಷೆಯೂ ಇದ್ದಿರಲಿಲ್ಲ. ಅಲ್ಲದೆ ವಿಶ್ವಾಮಿತ್ರಸೃಷ್ಟಿಯ ಪರಿಮಿತ ಉದ್ದೇಶಗಳಿಗೆ ಇಷ್ಟಲ್ಲ ಆಡಂಬರ ಬೇಕಾಗಿರಲೂ ಇಲ್ಲ. ನಾರಾಯಣ ತನ್ನ ಸುತ್ತಲೂ ಸಂಭವಿಸುತ್ತಿರುವ ಸಂಗತಿಗಳನ್ನು ತನ್ನ ಮನಸ್ಸಿನ ರಾವುಗನ್ನಡಿಯಲ್ಲಿ ಬಿಟ್ಟಿ ನೋಡಿ

ತನಗೆ ಅನುಕೂಲವಾಗುವಂತೆ ಅರ್ಥ ಕೊಡುತ್ತಾನೆ. ಒಂದು ಬಗೆಯ ವೀಕ್ಷಕ ವಿವರಣೆ ಕೊಡುತ್ತಾನೆ. ಅಷ್ಟರ ಮಟ್ಟಿಗೆ ಈ ತಂತ್ರ ಯಶಸ್ವಿಯಾಗಿದೆ." (ಸಿ.ಆರ್.ಯರವಿನತೆಲಿಮಠ, ೨೦೦೦, ಪುಟ ೧೩೦)

ಈ ರೀತಿಯಾಗಿ ಶ್ರೀರಂಗರು ಹೊಸ ವೈಚಾರಿಕ ನಿಲುವಿನಲ್ಲಿ ಕೆಲ ಪ್ರಸಂಗಗಳನ್ನು ವ್ಯಕ್ತಿಯೊಬ್ಬನ ವ್ಯಷ್ಟಿಪ್ರಜ್ಞೆಯಾಗಿ ನಿರೂಪಿಸುತ್ತಲೇ ಸಮಷ್ಟಿ ಪ್ರಜ್ಞೆಯೊಂದರ ತುಡಿತದ ಬಗೆಯಾಗಿ ರೂಪಿಸಿದ್ದಾರೆ. ಒಟ್ಟಿನಲ್ಲಿ ಇವರ ಕಾದಂಬರಿ ಹೊಸ ಪ್ರಯೋಗವನ್ನು ಹೊಂದಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಅಷ್ಟೇ ಅಲ್ಲದೆ ಶ್ರೀರಂಗರು ಹೊಸ ಪ್ರಯೋಗವಾಗಿ ನವ್ಯದ ಅಂಶವನ್ನು ಕೂಡಾ ಬಳಸಿಕೊಂಡಿದ್ದಾರೆ. ಕಾದಂಬರಿಯಲ್ಲಿ ಅಂತಹ ಕೆಲಸ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ.

ನವ್ಯದ ಪ್ರಮುಖ ಅಂಶವಾದ ವ್ಯಂಗ್ಯ ಅಥವಾ ವಿಡಂಬನೆಯನ್ನು ಶ್ರೀರಂಗರು ವಿಶ್ವಾಮಿತ್ರಸೃಷ್ಟಿ ಕಾದಂಬರಿಯಲ್ಲಿ ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ನಾರಾಯಣನು ರೈಲಿನಲ್ಲಿ ಪ್ರವಾಸ ಮಾಡುವ ಸಂದರ್ಭದಲ್ಲಿ ಅವನ ಧೋತರದ ಮೇಲೆ ಚಹಾ ಚೆಲ್ಲುತ್ತದೆ. ಅದನ್ನು ತೊಳೆದುಕೊಳ್ಳಲು ಸ್ಟೇಷನ್ನಿನಲ್ಲಿ ನೀರಿಗಾಗಿ ಪರದಾಡುತ್ತಾನೆ. ಅವನು ನೀರಿಗಾಗಿ ಪರದಾಡುವ ದೃಶ್ಯವನ್ನು ತುಂಬಾ ವ್ಯಂಗ್ಯವಾಗಿ ಲೇಖಕರು ಚಿತ್ರಿಸಿದ್ದಾರೆ.

ಇದೇ ರೀತಿಯ ವ್ಯಂಗ್ಯವನ್ನು ಮತ್ತೊಂದು ಸಂದರ್ಭದಲ್ಲಿ ಚಿತ್ರಿಸಿದ್ದಾರೆ. ರೈಲಿನಲ್ಲಿ ಪ್ರಯಾಣಿಸುತ್ತಿರುವಾಗ ನಾರಾಯಣನಿಗೆ ಅಸಹ್ಯವೆನ್ನಿಸಿತು. "ನಿದ್ದೆ ಮಾಡುವಾಗ ಗುರಿಕೆಯನ್ನು ಗುಡುಗಿಸುವುದೆಂದರೆ ಒಮ್ಮೆಲೆ ನಗೆಬಂದಿತು. ಪಾಪ ಅವನ ಹೆಂಡತಿಯ ಸ್ಥಿತಿಯೇನು. ಈ ರಿಪೀಟರ್ ಅಲಾರ್ಮ ರಾತ್ರಿಯಲ್ಲಾ ನಡೆದರೆ" ಎಂದು ಹೇಳುವಲ್ಲಿ ವ್ಯಂಗ್ಯವನ್ನು ಲೇಖಕರು ಗುರುತಿಸಿದ್ದಾರೆ.

ನಾರಾಯಣನು ರೈಲಿನ ಕಿಟಕಿಯಿಂದ ಹೊರಗೆ ಬಿದ್ದಾಗ ಅವನಿಗೆ ಆದ ಅನುಭವನ್ನು ಲೇಖಕರು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ.

ನವ್ಯದವರ ಮತ್ತೊಂದು ಪ್ರಮುಖ ಅಂಶವೆಂದರೆ ಪ್ರತಿಭಟನೆ ಮತ್ತು ಬಂಡಾಯ ಧ್ವನಿ ಇದನ್ನು ಕೂಡಾ ನಾವು ಶ್ರೀರಂಗರ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ನಾರಾಯಣನ ಪಾತ್ರದಲ್ಲಿ ಕಾಣಬಹುದು.

ನಾರಾಯಣನನ್ನು ಬಂಧನದಲ್ಲಿ ಕಟ್ಟಿಹಾಕಬೇಕೆಂಬುದು ಅವನ ತಂದೆ ಶೀನಪ್ಪನಾಯಕನ ಒಂದು ಮನೋಧರ್ಮವಾಗಿತ್ತು. ಅದರಿಂದ ಸಿಡಿದೆದ್ದು ಹೊರಬರಬೇಕೆಂಬುದು ನಾರಾಯಣನ ಒಂದು ಮನೋಧರ್ಮವಾಗಿತ್ತು. ಅದಕ್ಕಾಗಿ ಅವನು ಕಮತೂರಿನಲ್ಲಿ ಚಹಾದಂಗಡಿಯಲ್ಲಿ ಕೆಲಸ ಮಾಡಲು ಸಿದ್ಧನಾದನು ಇದರ ಮೂಲಕವೇ ಅವನ ಪ್ರತಿಭಟನೆಯ ಮನೋಧರ್ಮ ಬೆಳೆಯುತ್ತದೆ.

ನಾರಾಯಣನು ತನಗೆ ಇಷ್ಟವಿಲ್ಲದ ಮದುವೆಯ ಮನೆಯನ್ನು ಬಿಟ್ಟು ಬಂದು ತಂದೆಯ ಅಧಿಕಾರವನ್ನು ಪ್ರತಿಭಟಿಸುತ್ತಾನೆ. ನಂತರ ತನ್ನ ಸುತ್ತಲು ನಡೆಯುವ ಸಮಾಜದ ಮೌಢ್ಯ ಮತ್ತು ಜನರ ರೀತಿ, ನೀತಿ, ಮಾತುಕತೆ, ವಿನೋದ, ಕಲಹ, ಕುಹಕ, ಅಜ್ಞಾನವನ್ನು ಹೋಗಲಾಡಿಸಿ ಅಂತಹ ಜನರನ್ನು ಸುಶಿಕ್ಷಿತರನ್ನಾಗಿ ಮಾಡಬೇಕೆಂದು ನಾರಾಯಣ ಬಂಡೇಳುತ್ತಾನೆ.

ಕಮತೂರಿಗೆ ಬಂದ ನಾರಾಯಣನಿಗೆ ತುಳಜಿ ಎಂಬ ಮಹಿಳೆಯ ಪರಿಚಯವಾಗುತ್ತದೆ. ತುಳಜಿ ಆ ಊರಿನ ಪಂಚರಲ್ಲಿ ಒಬ್ಬನಾದ ಕುಲಕರ್ಣಿಗೆ ಹುಟ್ಟಿದ ಅನೈತಿಕ ಸಂಬಂಧದ ಮಗಳು. ಕುಲಕರ್ಣಿಯಿಂದ ಅವಳಿಗೆ ಯಾವ ರೀತಿಯ ನೆರವು ದೊರಕುವುದಿಲ್ಲ ಎಂಬ ವಿಷಯ ನಾರಾಯಣನಿಗೆ ತಿಳಿಯುತ್ತದೆ. ತುಳಜಿಗೆ ಕುಲಕರ್ಣಿಯಿಂದ ಎಲ್ಲ ರೀತಿಯ ಸಹಾಯವನ್ನು ಮಾಡಿಸಿಕೊಡಬೇಕೆಂಬುದು ನಾರಾಯಣನ ಹಟ. ಅದಕ್ಕಾಗಿ ಕುಲಕರ್ಣಿಯ ವಿರುದ್ಧ ಬಂಡೇಳುತ್ತಾನೆ.

ಈ ಎಲ್ಲ ಸಂದರ್ಭದಲ್ಲಿಯೂ ನಾರಾಯಣನೇ ಪ್ರತಿಭಟನೆ ಕೈಗೊಳ್ಳುತ್ತಾನೆ. ಇದು ಈ ಕಾದಂಬರಿಯ ಒಂದು ವಿಶೇಷ ಅಂಶವಾಗಿದೆ.

ನವ್ಯ ಮತ್ತೊಂದು ಅಂಶವಾದ ತೀಕ್ಷ್ಣ ಸಂವೇದನೆಯನ್ನು ಶ್ರೀರಂಗರ ಕಾದಂಬರಿಯಲ್ಲಿ ಕಾಣಬಹುದು. ನಾರಾಯಣ ರೈಲಿನಲ್ಲಿ ಹೋಗುವಾಗ ವಾಸ್ತವ ಘಟನೆಯನ್ನು ವೀಕ್ಷಿಸುತ್ತಾ ಅವನ್ನು ಬೇರೆ ರೀತಿಯಲ್ಲಿ ಯೊಚಿಸತೊಡಗುತ್ತಾನೆ. ಈ ರೀತಿಯಾಗಿ ಯೋಚನೆ ಮಾಡುವುದರಿಂದ ಅವನ ಮನಸ್ಸಿನಲ್ಲಿ ಒಂದು ರೀತಿಯ ತೊಳಲಾಟ, ವೇದನೆ ಮತ್ತು ವಾಸ ಮಾಡುವ ಜನರ ನಡೆ ನುಡಿಯ ಬಗ್ಗೆ ಹೇಸಿಗೆ ಉಂಟಾಗುತ್ತದೆ. ಇದರಿಂದ ಮನಸ್ಸು ಅಸಹನೀಯವಾಗಿ ದುರ್ಬಲವಾಗುತ್ತದೆ. ಈ ಒಂದು ತೀಕ್ಷ್ಣ ಸಂವೇದನೆಯನ್ನು ನಾವು ಕಾದಂಬರಿಯಲ್ಲಿ ನಾರಾಯಣನ ಪಾತ್ರದ ಮೂಲಕ ತಿಳಿಯಬಹುದು.

ನವ್ಯದವರ ಪ್ರಮುಖ ಅಂಶವಾದ ಮೌಲ್ಯಗಳ ಪುನರ್ವಿಮರ್ಶೆ ಇದನ್ನು ನಾವು ಶ್ರೀರಂಗರ ಕಾದಂಬರಿಯಲ್ಲಿ ಕಾಣಬಹುದು. ನಾರಾಣಯನೆಂಬ ಪಾತ್ರ ಈಗಾಗಲೇ ಅಸ್ತಿತ್ವದಲ್ಲಿರುವ ಪರಂಪರಾಗತ ಹಾಗೂ ರೂಢಿಗತ ಮೌಲ್ಯಗಳನ್ನು ಪ್ರತಿ ಸಂದರ್ಭದಲ್ಲಿ ಪ್ರಶ್ನಿಸಿ ಅದಕ್ಕೆ ಉತ್ತರ ರೂಪವಾಗಿ ಮೌಲ್ಯಗಳ ಪುನರ್ವಿಮರ್ಶೆಯನ್ನು ಮಾಡುವ ಬಗೆ ನವ್ಯ ತಂತ್ರಕ್ಕೆ ಹತ್ತಿರವಾಗಿದೆ. ಈ ರೀತಿ ಲೇಖಕರು ನಾರಾಯಣನ ಪಾತ್ರದ ಮೂಲಕ ಮೌಲ್ಯಗಳ ಪುನರ್ವಿಮರ್ಶೆಯನ್ನು ಮಾಡಿದ್ದಾರೆ.

ಬುದ್ಧಿಯ ಪ್ರಾಧಾನ್ಯತೆಯು ಕೂಡಾ ನವ್ಯದ ಅಂಶವಾಗಿದ್ದರಿಂದ ಲೇಖಕರು ಇದನ್ನು ಕಾದಂಬರಿಯಲ್ಲಿ ನಾರಾಯಣನ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

> "ನಾರಾಯಣ ಹೇಳುತ್ತಾನೆ ತಾನಿನ್ನು ಎಂದಿಗೂ ಮದುವೆಯನ್ನ ಮಾಡಿಕೊಳ್ಳಲಿಕ್ಕಿಲ್ಲ. ಅಲ್ಲಿಯೇ ನಿಶ್ಚಯ ಮಾಡಿಬಿಟ್ಟ ನಾರಾಯಣ. ಆದರೆ ನಿನ್ನಿನ ಮದಿವೆ? ಛೇ ಅದು ತನ್ನ ಮದುವೆ ಅಲ್ಲ. ಆ ಹುಡುಗೆ ತನ್ನ ಮಡದಿಯಲ್ಲ. ತಾನು ಎಂದಿಗೂ ಏನನ್ನು ಕೇಳಿದ್ದಿಲ್ಲ ಮಾತು ಕೊಟ್ಟದಿಲ್ಲ. ...ಥೂ! ಈ ಹಾಳು ಗುಡಿಯ ಹಾದಿ ಮುಂದೆ ಸಾಗುವದೇ ಇಲ್ಲವೇ ನಿನ್ನಿನ ದಿವಸ ನಾನು ಕೂತು ಬಂದ ಎತ್ತಿನ ಗಾಡಿಗಿಂತ ಇದು -ಛೆ -ಆ ಗಾಡಿಗೆ ಹೋಲಿಸಿದರೆ ಇದು ಪುಷ್ಪಕವಿಮಾನ ಅಬ್ಬ ಶಿವನಿಗೂ ಒಂದು ಎತ್ತು ನಂದಿ ವಾಹನ ಇದ್ದಿತಂತೆ ಅದಕ್ಕೇ ಸ್ಮಶಾನಕೆ ಓಡಿಹೊದನೋ ಏನೋ ಪಶುಪತಿ? ಗೋಮಾತೆ ನಮ್ಮ ಮಲತಾಯಿ ಇದ್ದಾಳೇನೋ ಅಂತೀನಿ... ಅವಳ ಮಕ್ಕಳು ನಮ್ಮನ್ನ ಈ ಪರಿ ತೊಟ್ಟಿಂದೊಳಗೆ ಅಪ್ಪಳಿಸೋದು ಯಾಕ ಇಲ್ಲಾಂದ್ರೆ?

> ನಮ್ಮ ಜೀವನದ ಎಲ್ಲಾ ಸಾಧನ ಹೀಗೆ ಇದ್ದ ಮ್ಯಾಲೆ ವೈರಾಗ್ಯದ ತತ್ವಜ್ಞಾನ ನಮ್ಮ ದೇಶದಲ್ಲಿಯೇ ನಮ್ಮ ಸಮಾಜದಲ್ಲಿಯೇ ಹುಟ್ಟೋದೇನಾಶ್ಚರ್ಯ? ಒಂದು ನಿಮಿಷ ನಾರಾಯಣನಿಗೆ ಏನೆ ಒಂದು ದೊಡ್ಡ ತೊಡಕು ಬಿಟ್ಟಂತೆ ಮನಸ್ಸಿಗೆ ಸಮಾಧನವಾಯಿತು. ಹೃದಯ ಹಿಗ್ಗಿತು. ಮುಖ ಮುಗುಳೋಡೆಯಿತು. ಕಾಲೇಜಿನಲ್ಲಿದ್ದಾಗ ತಾನು ಭಾರತೀಯ ತತ್ವಜ್ಞಾನವನ್ನು ತುಲನಾತ್ಮಕ ದೃಷ್ಟಿಯಿಂದ ವಿಮರ್ಶಿಸುತ್ತಿರುವುದು ಸ್ಮರಣೆಗೆ ಬಂದಿತು. ಆಗ ಅವನಿಗೊಂದು ದೊಡ್ಡ ತೊಡಕು ಕ್ರೈಸ್ತ ಧರ್ಮವನ್ನು ಬಿಟ್ಟರೆ ಮತ್ತಾವ ಪರಧರ್ಮದಲ್ಲಿಯೂ ವೈರಾಗ್ಯವೂ ಜೀವನದ ಗುರಿಯಾಗಿರಲಿಲ್ಲವಲ್ಲ. ಯೇಸುಕ್ರಿಸ್ತನೂ ಕೂಡ ಭರತ ವರ್ಷದಲ್ಲಿ ಕೆಲದಿನ ನಿಂತೂ ಅಭ್ಯಾಸ ಮಾಡಿದನೆಂದು ದಂತಕಥೆ ಇದೆ.

ಎಂಬ ಮಾತಿನಲ್ಲಿ ನಾರಾಯಣನ ಬುದ್ದಿಯ ಪ್ರಾಧಾನ್ಯತೆಯನ್ನು ಸೂಚಿಸುತ್ತದೆ.

ಅದೇ ರೀತಿ ವಾಸ್ತವತೆಯು ಕೂಡಾ ನವ್ಯದ ಅಂಶ ಇದನ್ನು ನಾವು ಕಾದಂಬರಿಯುದ್ದಕ್ಕೂ ಕಾಣಬಹುದಾಗಿದೆ. ಹುಡುಕಾಟ ಕೂಡಾ ನವ್ಯದ ಅಂಶ ಇದನ್ನು ಕೂಡಾ ನಾರಾಯಣನ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ನಾರಾಯಣ ಯಾವುದೋ ಒಂದು ಯೋಚನೆಯ ಮೂಲಕ ಸತ್ಯದ ಹುಡುಕಾಟವನ್ನು ಮಾಡುವುದು ಇದರಲ್ಲಿ ಕಂಡುಬರುತ್ತದೆ.

ಭ್ರಮಾನಿರಸನವೂ ನವ್ಯದ ಪ್ರಮುಖ ಅಂಶ ಈ ಕಾದಂಬರಿಯು ಭ್ರಮನಿರಸನವಾದಂತೆ ಕಂಡುಬಂದರೂ ಕೂಡಾ ನವೋದಯದ ಪ್ರಭಾವವಿರುವುದರಿಂದ ಕೊನೆಯಲ್ಲಿ ಇದು ಯಶಸ್ಸಿನಲ್ಲಿ ಕೊನೆಗಾಣುವುದನ್ನು ಕಾಣಬಹುದಾಗಿದೆ.

ಈ ರೀತಿಯಾಗಿ ನವ್ಯದ ಪ್ರಮುಖ ಅಂಶಗಳನ್ನು ಶ್ರೀರಂಗರು ತಮ್ಮ ಕಾದಂಬರಿಯಾದ ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ಬಳಸಿರುವುದು ಒಂದು ವೈಶಿಷ್ಟ್ಯಪೂರ್ಣವಾದ ಸಂಗತಿ ಎನ್ನಬಹುದು.

**ಆಕರ ಸಾಹಿತ್ಯ**


೧. ಗಿರಡ್ಡಿ ಗೋವಿಂದರಾಜ, ೧೯೮೭, ಕಾದಂಬರಿ ವಸ್ತು ಮತ್ತು ತಂತ್ರ ಸ್ನೇಹಾ ಪ್ರಕಾಶನ ಬೆಂಗಳೂರು

೨. ಸಿ.ಆರ್.ಯರವಿನತೆಲಿಮಠ, ೨೦೦೦, ಪಾಶ್ಚಾತ್ಯ ಸಾಹಿತ್ಯವಾದಗಳು ಮತ್ತು ಕನ್ನಡ ಸಾಹಿತ್ಯ ಸಂದರ್ಭ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಎಲ್.ಎಸ್.ಶೇಷಗಿರಿರಾವ್, ೧೯೯೯, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂತಿಕ ಪ್ರಕಾಶನ ಬೆಂಗಳೂರು

೪. ದು.ನಿಂ.ಬೆಳಗಲಿಯವರ ಕಾದಂಬರಿಗಳು ಒಂದು ಅಧ್ಯಯನ ಹಳ್ಳಿಕೇರಿ

# ಅಧ್ಯಾಯ ಐದು

## ಸಮಾರೋಪ

ಶ್ರೀರಂಗರ ವಿಶ್ವಾಮಿತ್ರಸೃಷ್ಟಿ ಕಾದಂಬರಿಯ ಸಮಗ್ರ ನೋಟವನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಸಾಹಿತ್ಯ ಲೋಕದಲ್ಲಿ ಈ ಕಾದಂಬರಿಯ ಬಗ್ಗೆ ಅಲ್ಪಸ್ವಲ್ಪ ಚರ್ಚೆ ಆಗಿದ್ದರು ಕೂಡಾ ಅದರ ತಲಸ್ಪರ್ಶಿ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ. ಅವರ ಇನ್ನುಳಿದ ಕಾದಂಬರಿಗಳ ಕುರಿತು ಪಾರ್ಶ್ವಿಕ ನೆಲೆಯಲ್ಲಿ ಚರ್ಚೆ ಆಗಿದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯಿಕ ಚರ್ಚೆಯಾಗಿ ಕೆಲ ಅಂಶವನ್ನು ಅಂದರೆ ಸೃಜನಶೀಲ ಪ್ರತಿಭೆ, ಸಮಕಾಲೀನ ನಿಲುವು ಮತ್ತು ಒಟ್ಟು ಆಶಯವನ್ನು ಹೇಳುವ ಪ್ರಯತ್ನ ಸಂಪ್ರಬಂಧದ ಉದ್ದಕ್ಕೂ ಮಾಡಲಾಗಿದೆ.

a. ಪ್ರಸ್ತುತ ವಿಶ್ವಾಮಿತ್ರಸೃಷ್ಟಿ ಕಾದಂಬರಿಯ ಅಧ್ಯಯನದ ಮೂಲಕ ಶ್ರೀರಂಗರ ಸೃಜನಶೀಲ ಪ್ರತಿಭೆಯನ್ನು ಸಂಪ್ರಬಂಧದಲ್ಲಿ ಗುರುತಿಸಲಾಗಿದೆ. ಶ್ರೀರಂಗರು ತಮ್ಮ ಕಾದಂಬರಿಯಲ್ಲಿ ಒಬ್ಬ ವ್ಯಕ್ತಿಯ ವಿಚಾರದ ಸರಮಾಲೆಯಲ್ಲಿ ಭೂತ, ಭವಿಷ್ಯ ಮತ್ತು ವರ್ತಮಾನಗಳನ್ನು ನಿರೂಪಿಸಿ ವ್ಯಕ್ತಿಯ ವರ್ತನೆ ಯಾವ ರೀತಿ ಇರುತ್ತದೆ ಎಂಬುದನ್ನು ತೋರಿಸುವ ಕೌಶಲ್ಯ ಮತ್ತು ಅವರು ಬರೆದ ಕಾದಂಬರಿ ಪಾತ್ರ ವೈವಿಧ್ಯ, ಕಥಾಹಂದರವಾಗಿರದೇ ಹೋದರೂ ಕಥನಕ್ರಮವಾಗಿ ಅವರು ನಿರೂಪಿಸಿದ ರೀತಿ ಹಾಗೂ ತಾತ್ವಿಕತೆಯನ್ನು ನೇರವಾಗಿ ಹೇಳದೇ ಹೋದರೂ ಕೂಡಾ ಹಲವಾರು ತಾತ್ವಿಕ ಸಂಗತಿಗಳು ಅವರ ಕಥನ ಶೈಲಿಯಲ್ಲಿ ಅಡಕವಾಗಿರುವ ಕ್ರಮ ಶ್ರೀರಂಗರ ಸ್ವೋಪಜ್ಞತೆಯನ್ನು ಎತ್ತಿತೋರಿಸುತ್ತದೆ. ಯಾವುದೇ ಸಣ್ಣ ವಿಚಾರವನ್ನು ಪ್ರಾಯೋಗಿಕ ಅದನ್ನು ಅಲೆಗಳ ರೂಪದಲ್ಲಿ ಕಾದಂಬಯುದ್ದಕ್ಕೂ ತಂದಿರುವುದು. ಪ್ರಜ್ಞಾಪ್ರವಾಹ ತಂತ್ರದ ಪ್ರಯೋಗಿಕತೆಯನ್ನು ಸ್ಪಷ್ಟಪಡಿಸುತ್ತದೆ. ಇವೆಲ್ಲ ಅಂಶಗಳನ್ನು ಕ್ರೋಢಿಕರಿಸಿದರೆ ಈ ಕೃತಿ ಪ್ರಾಯೋಗಿಕ ಹಿನ್ನೆಲೆಯಲ್ಲಿ ಮೂಢಿಬಂದಿರುವುದನ್ನು ಸಂಪ್ರಬಂಧದ ಮೂಲಕ ಗುರುತಿಸಲಾಗಿದೆ.

b ಶ್ರೀರಂಗರದು ಅವರ ಸಮಕಾಲೀನ ಲೇಖಕರಿಗಿಂತ ವಿಭಿನ್ನ ವ್ಯಕ್ತಿತ್ವ ನಾವು ಇದನ್ನು ಅವರ ಕಾದಂಬರಿಯ ಪ್ರತಿಪಾದನಾ ಶೈಲಿಯಿಂದ ಗುರುತಿಸಬಹುದಾಗಿದೆ. ಹಲವು ಉದಾಹರಣೆಗಳ

ಮೂಲಕ ಇದನ್ನು ಸಮರ್ಥಿಸಿದೆ. ಅವರ ಸಮಕಾಲೀನ ಕಾದಂಬರಿಗಳು ವಾಸ್ತವ ಚಿತ್ರಣದಲ್ಲಿ ಮುಳುಗಿದ್ದವು ಆದರೆ ಶ್ರೀರಂಗರು ನೇರವಾಗಿ ವಾಸ್ತವ ಚಿತ್ರಣವನ್ನಷ್ಟೇ ಕೊಡದೆ, ವಿಭಿನ್ನ ತಂತ್ರ ಹಾಗೂ ಅನೇಕ ವಾದಗಳ ಪರಿಪೇಕ್ಷ್ಯದಲ್ಲಿ ವಿಚಾರಧಾರೆಯನ್ನು ಪ್ರತಿಪಾದಿಸುವ ಕ್ರಮ ಭಿನ್ನವಾಗಿದೆ ಎಂಬುದನ್ನು ಸಂಪ್ರಬಂಧದಲ್ಲಿ ತೋರಿಸಿದೆ. ಅವರ ಕಾದಂಬರಿಯಲ್ಲಿ ಕಥೆಯ ಶೈಲಿ ಮತ್ತು ಪಾತ್ರ ನಿರೂಪಣೆಯನ್ನು ತಂತ್ರದ ಮುಖೇನ ಹೆಣೆದ ಬಗೆಯ ಮೂಲಕ ಸೋಪಜ್ಞತೆಯನ್ನು ನಾವಿಲ್ಲಿ ಗುರುತಿಸಬಹುದಾಗಿದೆ. ಒಟ್ಟಿನಲ್ಲಿ ಹೇಳುವುದಾರೆ ಇವರ ಕಾದಂಬರಿ ವಿಶಿಷ್ಟ ಬಗೆಯ ಕಾದಂಬರಿಯಾಗಿದೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

c. ಶ್ರೀರಂಗರ ವಿಶ್ವಾಮಿತ್ರಸೃಷ್ಟಿ ಕಾದಂಬರಿಯ ಆಶಯವನ್ನು ಬೇರೆ ಬೇರೆ ಅಂಶಗಳಿಂದ ವಿಶ್ಲೇಷಿಸಲಾಗಿದೆ. ಸಂಭಾಷಣೆ, ಸ್ವಾರಸ್ಯ, ಪಾತ್ರವೈಶಿಷ್ಟ್ಯ, ಅಭಿವ್ಯಕ್ತಿ ಸಾಮರ್ಥ್ಯ ಇವುಗಳ ಮೂಲಕ ಕೃತಿಕಾರರ ಒಟ್ಟು ಆಶಯವನ್ನು ಗ್ರಹಿಸಲಾಗಿದೆ. ಇವರ ಈ ಕಾದಂಬರಿಯಲ್ಲಿ ಬಳಕೆಯಾದ ಪ್ರಾದೇಶಿಕ ನಿಲುವು ಭಾಷಾತ್ಮಕ ರೀತಿ, ನೀತಿ, ಅಲ್ಲಿಯ ಒಂದು ಆಡುಮಾತಿನ ಪರಿಸರ ಗಾದೆ, ಹೋಲಿಕೆ ಮತ್ತು ಪದ್ಯದ ಬಳಕೆ ಇವನ್ನು ಲೇಖಕರು ತಮ್ಮ ಕಾದಂಬರಿಯಲ್ಲಿ ಕಟ್ಟಿಕೊಟ್ಟ ಬಗೆಯನ್ನು ನಾವು ಈ ಬಗೆಯ ಅಭಿವ್ಯಕ್ತಿ ಸಾಮರ್ಥ್ಯದಲ್ಲಿ ಶ್ರೀರಂಗರು ಈ ಕಾದಂಬರಿ ಆಕೃತಿಯನ್ನು ಪಡಿಮೂಡಿಸಿದ್ದಾರೆಂಬುದನ್ನು ತೋರಿಸುವ ಯತ್ನವನ್ನು ಮಾಡಲಾಗಿದೆ.

ಪ್ರಸ್ತುತ ವಿಶ್ವಾಮಿತ್ರಸೃಷ್ಟಿಯನ್ನು ಮಾತ್ರ ಅಧ್ಯಯನ ಮಾಡಲಾಗಿದ್ದು ಅವರ ಇನ್ನುಳಿದ ಕಾದಂಬರಿಗಳನ್ನು ಈ ನಿಟ್ಟಿನಲ್ಲಿ ವಿಶ್ಲೇಷಣೆಗೆ ಒಳಪಡಿಸಬಹುದಾಗಿದೆ. ಆ ಎಲ್ಲಾ ಕಾದಂಬರಿಗಳ ವಿಭಿನ್ನ ದೃಷ್ಟಿಕೋನಗಳನ್ನು ವಿಮರ್ಶೆಗೆ ಒಳಪಡಿಸುವ ಸಾಧ್ಯತೆಯನ್ನು ಇಲ್ಲಿ ಪ್ರಾಸಾಂಗಿಕವಾಗಿ ಹೇಳಬಹುದಾಗಿದೆ. ಪ್ರಸ್ತುತ ಅಧ್ಯಯನ ಈ ನಿಟ್ಟಿನಲ್ಲಿ ಒಂದು ಕಿರು ಪ್ರಯತ್ನವಾಗಿದೆ ಎಂಬುದನ್ನು ಬೇರೆ ಬೇರೆ ಹಂತಗಳಲ್ಲಿ ಆಂಶಿಕವಾಗಿ ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಶ್ರೀರಂಗರ ಕೃತಿ ವಿವರ

ಶ್ರೀರಂಗರು ಶತಮಾನದ ಕನ್ನಡ ನಾಡಿನ ಸಾಂಸ್ಕೃತಿಕ ವ್ಯಕ್ತಿಗಳಲ್ಲಿ ಒಬ್ಬರು. ಇವರು ಶಿಕ್ಷಕರಾಗಿ, ಪತ್ರಕರ್ತರಾಗಿ, ಚಳುವಳಿಗಾರರಾಗಿ, ಲೇಖಕರಾಗಿ ಅವರು ಮಾಡಿದ ಕೆಲಸ ದೊಡ್ಡದು. ಅವರು ನಾಟಕವನ್ನಷ್ಟೇ ಅಲ್ಲದೇ ಕಾದಂಬರಿ, ಏಕಾಂಕ, ಚರಿತ್ರೆ ಗ್ರಂಥಗಳು, ನಾಟ್ಯ ಗ್ರಂಥಗಳು, ವಿಮರ್ಶೆ, ವಿವೇಚನಾತ್ಮಕ ಗ್ರಂಥಗಳು, ಅನುವಾದಿತ ಗ್ರಂಥಗಳನ್ನು ಬರೆದಿದ್ದಾರೆ.

ಶ್ರೀರಂಗರು ಒಟ್ಟು ೪೬ ನಾಟಕಗಳನ್ನು ೧೩ ಕಾದಂಬರಿಯಯನ್ನು ೬೦ಕ್ಕೂ ಹೆಚ್ಚು ಏಕಾಂಕವನ್ನು ಮತ್ತು ೪ ಚರಿತ್ರೆ ಗ್ರಂಥವನ್ನು ೫ ನಾಟ್ಯ ಗ್ರಂಥವನ್ನು ೩ ವಿಮರ್ಶೆಯನ್ನು ೩ ವಿವೇಚನಾತ್ಮಕ ಗ್ರಂಥವನ್ನು ೪ ಅನುವಾದಿತ ಗ್ರಂಥವನ್ನು ಬರೆದಿದ್ದಾರೆ. ಅವುಗಳ ವಿವರ ಈ ರೀತಿಯಾಗಿದೆ.

**ನಾಟಕಗಳು :**

| | | |
|---|---|---|
| ೧. | ಸ್ವಾರ್ಥತ್ಯಾಗ (ಅಪ್ರಕಟಿತ) | (೧೯೨೦) |
| ೨. | ಧರ್ಮವಿಜಯ (ಅಪ್ರಕಟಿತ) | (೧೯೨೧) |
| ೩. | ಇದೇ ಸಂಸಾರ (ಅಪ್ರಕಟಿತ) | (೧೯೨೨) |
| ೪. | ಕನ್ನಡ ಶ್ಯಾಮ (ಅಪ್ರಕಟಿತ) | (೧೯೨೩) |
| ೫. | ಉದರ ವೈರಾಗ್ಯ | (೧೯೩೦) |
| ೬. | ಮುಕ್ಕಣ್ಣ ವಿರಾಟ ಪುರುಷ | (೧೯೩೦,೪೫) |
| ೭. | ಅಧಿಕ ಮಾಸ | (೧೯೩೨) |
| ೮. | ವೈದ್ಯರಾಜ(೧೯೩೨) | |
| ೯. | ದರಿದ್ರ ನಾರಾಯಣ | (೧೯೩೩) |
| ೧೦. | ಹರಿಜನ್ವಾರ | (೧೯೩೪,೫೩,೬೦) |
| ೧೧. | ಪ್ರಪಂಚ ಪಾಣಿಪತ್ತು | (೧೯೩೪,೪೧,೫೭) |
| ೧೨. | ಪರಮೇಶ್ವರ ಪುಲಕೇಶಿ | (೧೯೩೬,೬೬) |
| ೧೩. | ನರಕದಲ್ಲಿ ನರಸಿಂಹ | (೧೯೩೭) |

೧೪. ಸಂಧ್ಯಾಕಾಲ (೧೯೩೯,೬೧,೬೩)

೧೫. ನಿರಾಹಾರ (ಏಕಾಂಕ ಸಂಗ್ರಹ) (೧೯೪೪)

೧೬. ಸಂಸಾರಿಗಳ ಕಂಸ (೧೯೪೫)

೧೭. ಜರಾಸಂಧಿ (೧೯೪೮)

೧೮. ಕರ್ತಾರನ ಕಮ್ಮಟ (೧೯೫೫)

೧೯. ಶೋಕಚಕ್ರ(೧೯೫೭,೬೧)

೨೦. ಜೀವನ ಜೋಕಾಲಿ (೧೯೫೭)

೨೧. ಗೆಳೆಯ ನೀನು ಹಳೆಯ ನಾನು (೧೯೫೮

೨೨. ಕತ್ತಲೆ ಬೆಳಕು (೧೯೫೯,೭೪

೨೩. ಕೇಳು ಜನಮೇಜಯ (೧೯೬೦,೬೯)

೨೪. ಅಮೃತರಂಗ (ಮೂರು ನಾಟಕಗಳ ಸಂಗ್ರಹ) (೧೯೬೧)

೨೫. ಹುಟ್ಟಿದ್ದು ಹೊಲೆಯೂರು (೧೯೬೧)

೨೬. ಸಿರಿಪುರಂದರ (೧೯೬೧)

೨೭. ಶ್ರೀರಂಗರ ನಾಟ್ಯರಂಗ (ಭಾಗ ೧, ಇಪ್ಪತ್ತು ಏಕಾಂಕಗಳು) (೧೯೬೫)

೨೮. ರಂಗಭಾರತ (ಮೂರು ನಾಟಕ) (೧೯೬೬)

೨೯. ಶ್ರೀರಂಗ ನಾಟ್ಯತರಂಗ (ಭಾಗ ೨, ಇಪ್ಪತ್ತೇಳು ಏಕಾಂಕಗಳು) (೧೯೬೭)

೩೦. ನೀಕೊಡೆ ನಾ ಬಿಡೆ (೧೯೬೯)

೩೧. ಸಂಜೀವಿನಿ (೧೯೬೧)

೩೨. ಸಾವಿತ್ರಿ (೧೬೬೧)

೩೩. ಶತಾಯು ಗತಾಯು (೧೯೬೯)

೩೪. ಸ್ವರ್ಗಕ್ಕೆ ಮೂರೇ ಬಾಗಿಲು (೧೯೭೦)

೩೫. ಅಪರಾಧಂಗಳ ಕ್ಷಮಿಸೊ (೧೯೭೧)

೩೬. ಯಾರಿಗೆ ಮಾಡ್ತಿ ಮ್ಯಾಂ (೧೯೭೫)

೩೭. ಇದು ಭಾಗ್ಯ ಇದು ಭಾಗ್ಯ (೧೯೭೫)

೩೮. ಏನ ಬೇಡಲಿ ನಿನ್ನ ಬಳಿಗೆ ಬಂದು (೧೯೭೫)

೩೯. ಈಸಬೇಕು ಇದ್ದು ಜಯಿಸಬೇಕು (೧೯೭೫)

೪೦. ಸಮಗ್ರ ಮಂಥನ

೪೧. ಉತ್ತಮ ಪ್ರಭುತ್ವ ಲೊಳಲೊಟ್ಟೆ

೪೨. ಭಾರತ ಭಾಗ್ಯ - ವಿಘಾತಾ

೪೩. ನೀವೇ ಹೇಳಿರಿ

೪೪. ಗುಮ್ಮನೆಲ್ಲಿಹ ತೋರಮ್ಮ (೧೯೭೯)

೪೫. ನೀಮಾಯೆಯೊಳಗೆ ನಿನ್ನೊಳು ಮಾಯೆಯೊ

೪೬. ಅಗ್ನಿಸಾಕ್ಷಿ (೧೯೮೫)

**ಕಾದಂಬರಿಗಳು :**

೧. ವಿಶ್ವಾಮಿತ್ರನ ಸೃಷ್ಟಿ (೧೯೩೪,೭೪)

೨. ಭರಮಪ್ಪನ ಭೂತ (೧೯೭೨)

೩. ಪುರಷಾರ್ಥ (೧೯೪೭)

೪. ಕುಮಾರ ಸಂಭವ (೧೯೪೯)

೫. ಪ್ರಕೃತಿ (೧೯೫೪)

೬. ಪುರುಷ (೧೯೫೬)

೭. ಅನಾದಿ (೧೯೫೯)

೮. ಅನಂತ (೧೯೫೯)

೯. ಗೌತಮನ ಶಾಪ (೧೯೬೨)

೧೦. ಸೌಜನ್ಯದ ಬೆಲೆ (೧೯೬೬)

೧೧. ವಿಪಚಕ್ರವ್ಯೂಹ (೧೯೬೭)

೧೨. ಉತ್ತರವಿಲ್ಲದ ಪ್ರಶ್ನೆ

೧೩. ಶ್ಯಾಮರಾಯನ ತತ್ವ (೧೯೮೬)

**ಚರಿತ್ರೆ ಗ್ರಂಥಗಳು :**

೧. ಕೆಮಾಲ ಪಾಶಾ (೧೯೩೭)

೨. ನನ್ನ ನಾಟ್ಯ ನೆನಪುಗಳು (೧೯೬೦)

೩. ನನ್ನ ನೆಚ್ಚಿನ ನೆಹರು (೧೯೬೪)

೪. ಸಾಹಿತಿಯ ಆತ್ಮ ಜಿಜ್ಞಾಸೆ (೧೯೭೩)

**ವಿಮರ್ಶೆ :**

೧. ಕಾಳಿದಾಸ (೧೯೬೦)

೨. ಕವಿಕುಲಗುರು ಕಾಳಿದಾಸ (೧೯೭೦)

**ನಾಟ್ಯ ಗ್ರಂಥಗಳು :**

೧. ನಾಟ್ಯ ದರ್ಪಣ (೧೯೬೫)

೨. ಕನ್ನಡ ರಂಗಭೂಮಿಯ ಪುರೋಭಿವೃದ್ಧಿ (೧೯೬೮)

೩. ಪ್ರೇಕ್ಷಕ ವರ್ಗ: ನಮ್ಮ ರಂಗಭೂಮಿಯ ಸಮಸ್ಯೆ (೧೯೬೯)

೪. ರಂಗನಾಟಕ ಶಾಸ್ತ್ರ (೧೯೭೧)

೫. ಭರತ ನಾಟ್ಯ ಶಾಸ್ತ್ರ (೧೯೭೩)

**ವಿವೇಚನಾತ್ಮಕ ಗ್ರಂಥಗಳು :**

೧. ಗೀತಾಗಾಂಭೀರ್ಯ (೧೯೪೧,೬೮)

೨. ಗೀತಾದರ್ಪಣ (೧೯೭೨)

**ಅನುವಾದಿತ ಗ್ರಂಥಗಳು :**

೧. ಭಗವಾನ್ ಬುದ್ಧ: ಮೂಲ ಧರ್ಮಾನಂದ ಕೋಸಾಂಬಿ (೧೯೫೬)

೨. ಹಾಳದೇಗುಲ: ಮೂಲ ಮಾಡಖೋಳಕರ (೧೯೬೦)

೩. ಪ್ರಾರಬ್ಧ ಮತ್ತು ಕಾಡುಕೋಳಿ (೧೯೬೧)

೪. ಚಂದ್ರಗುಪ್ತ: ಮೂಲ ಜಯಶಂಕರ ಪ್ರಸಾದ (೧೯೬೬)

**ಇಂಗ್ಲೀಷ್ ಬರವಣಿಗೆ :**

| | | |
|---|---|---|
| ೧. | Introduction to the Comprative philology of Indo Aryan Languages | (1932) |
| ೨. | Drama in sanskrit literature | (1947,67) |
| ೩. | Introduction to Bharath's Natyasastra | (1966) |
| ೪. | Indian Theatre | (1971) |

**ಇತರೆ :**

| | | |
|---|---|---|
| ೧. | ನಗೆ. (ಹಾಸ್ಯ ಕುರಿತ ಪ್ರಬಂಧ) | (೧೯೪೪) |
| ೨. | ಸ್ವಲ್ಪದರಲ್ಲಿ ಸ್ವಾರಸ್ಯ (ಹರಟೆಗಳು) | (೧೯೪೪) |
| ೩. | ತುರ್ತು ಸಂಹಾರ (ಹರಟೆಗಳು) | |
| ೪. | ಜಾತಿಯ ಸಮಸ್ಯೆ (ಸಮಾಜಶಾಸ್ತ್ರ) | (೧೯೪೪-೪೫) |
| ೫. | ಕಿಟ್ಟಣ್ಣನ ಕ್ಲಬ್ಬು (ಹರಟೆ) | (೧೯೫೭) |
| ೬. | ಸ್ವತಂತ್ರ ಭಾರತದ ರಾಜ್ಯಘಟನೆ (ರಾಜ್ಯಶಾಸ್ತ್ರ) | (೧೯೫೦) |
| ೭. | ಶ್ರೀರಂಗರ ಯಾತ್ರೆ ಪ್ರವಾಸಸಾಹಿತ್ಯ | (೧೯೭೦) |

## ಆಕರ ಸಾಹಿತ್ಯ


೧. ಶಿವರಾಮ ಪಡಿಕ್ಕಲ್, ೨೦೦೧, **ನಾಡು, ನುಡಿಯ ರೂಪಕ**, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ

೨. ಯು.ಮಹೇಶ್ವರಿ, ೨೦೦೧, **ಇದು ಮಾನುಷಿಯಾ ಓದು**, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು

೩. ಜಿ.ಎಸ್.ಅಮೂರ, ೧೯೯೮, **ಆಧುನಿಕ ಕನ್ನಡ ಸಾಹಿತ್ಯದ ವಿರಾಟ ಪುರುಷ**, ಪ್ರಿಯದರ್ಶಿನಿ ಪ್ರಕಾಶನ

೪. ಕೆ.ವಿಜಯಶ್ರೀ, ೨೦೦೨, **ಕನ್ನಡ ನವ್ಯ ಕಾದಂಬರಿಗಳು**, ಶ್ರೀರಾಮಕೃಷ್ಣ ಪ್ರಕಾಶನ ಬೆಂಗಳೂರು

೫. ಜಿ.ಎಸ್.ಅಮೂರ, ೧೯೯೪, **ಅರ್ಥಲೋಕ**, ಪ್ರಿಯದರ್ಶಿನಿ ಪ್ರಕಾಶನ, ವಿಜಯನಗರ ಬೆಂಗಳೂರು

೬. ಜಿ.ಎಸ್.ಶೇಷಗಿರಿರಾವ್, ೧೯೯೯, **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಅಂಕಿತ ಪ್ರಕಾಶನ ಬೆಂಗಳೂರು

೭. ಡಾ. ಕೇಶವ ಶರ್ಮ, ೨೦೦೫, **ಬಹುಮುಖಿ**, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು

೮. ಗುರುಪಾದ ಮರಿಗುದ್ದಿ, ೨೦೦೬, **ಕುವೆಂಪು ಕಾದಂಬರಿಗಳು**, ಕರ್ನಾಟಕ ಸಾಹಿತ್ಯ ಅಕಾಡೆಮಿ

೯. ಆರ್ಕೆ.ಮಣಿಪಾಲ, ೨೦೦೬, **ವಿಮರ್ಶೆಯ ಸವಾಲು**, ಸಂವಾದ ಪ್ರಕಾಶನ

೧೦. ಜಿ.ಎಸ್.ಆಮೂರ, ೨೦೦೬, **ಕನ್ನಡ ಕಥನ ಸಾಹಿತ್ಯ ಕಾದಂಬರಿ**, ದಿವ್ಯಾ ಪ್ರಿಂಟ್ಯಾನಿಕ್ಸ್

೧೧. ಎಚ್.ಎಸ್.ರಾಘುವೇಂದ್ರರಾವ್, ೧೯೮೫, **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ

೧೨. ಟಿ.ಪಿ.ಅಶೋಕ, ೧೯೯೨, **ಶಿವರಾಮಕಾರಂತ ಮೂರು ಅಧ್ಯಯನಗಳು**, ಅಕ್ಷರ ಪ್ರಕಾಶನ

೧೩. ಹರಿಹರ ಪ್ರಿಯ, ೧೯೯೮, **ಸಮಗ್ರ ವಿಚಾರ ವಿಮರ್ಶೆ**, ಸಂಪುಟ ೩ ಸಿ.ವಿ.ಜಿ ಪಬ್ಲಿಕೇಷನ್ಸ್ ಬೆಂಗಳೂರು

೧೪. ಗಿರಡ್ಡಿ ಗೋವಿಂದರಾಜ, ೧೯೮೭, **ಕಾದಂಬರಿ ವಸ್ತು ಮತ್ತು ತಂತ್ರ**, ಸ್ನೇಹ ಪ್ರಕಾಶನ, ಬೆಂಗಳೂರು

೧೫. ಎಸ್.ಎಸ್.ಭಗವತಿ, ಎಚ್.ಎನ್.ಮೇಲಿನ ಮನಿ, ೨೦೦೨, **ಹೊಸಗನ್ನಡ ಸಾಹಿತ್ಯಾವಲೋಕನ**, ವಿದ್ಯಾನಿಧಿ ಪ್ರಕಾಶನ ಗದಗ

೧೬. ಸಿ.ಆರ್.ಯರವಿನತೆಲಿಮಠ, ೨೦೦೦, **ಪಾಶ್ಚಾತ್ಯ ಸಾಹಿತ್ಯ ವಾದಗಳು ಮತ್ತು ಕನ್ನಡ ಸಾಹಿತ್ಯ ಸಂದರ್ಭ**, ಪ್ರಸಾರಾಂಗ ವಿಶ್ವವಿದ್ಯಾಲಯ, ಹಂಪಿ

೧೭. ಡಾ.ರಾಗೌ. ೨೦೦೫, **ಷಷ್ಟಿಸಂಪದ**, ಸಂವಹನ, ಮೈಸೂರು

೧೮. ಓ.ಎಲ್.ನಾಗಭೂಷಣಸ್ವಾಮಿ, ೧೯೯೮, **ಪ್ರಜ್ಞಾಪ್ರವಾಹ ತಂತ್ರ**, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೧೯. ಬರಗೂರು ರಾಮಚಂದ್ರಪ್ಪ, ೨೦೦೨, **ಕರ್ನಾಟಕ ಸಂಗಾತಿ**, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು

೨೦. ಕೀರ್ತಿನಾಥ ಕುರ್ತಕೋಟಿ, ೨೦೦೨, **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ**, ಮನೋಹರ ಗ್ರಂಥಮಾಲೆ, ಧಾರವಾಡ

೨೧. ವಾಯ್ ಎಂ.ಭಜಂತ್ರಿ, ೨೦೦೨, **ದು.ನಿಂ.ಬೆಳಗಲಿಯವರ ಕಾದಂಬರಿಗಳು : ಒಂದು ಅಧ್ಯಯನ**, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

